# ಇಸ್ಲಾಮಿನ ಚೈತನ್ಯ

ಲೇಖಕರು

ಸೈಯದ್ ಅಬುಲ್ ಆಲಾ ಮೌದೂದಿ

ಅನುವಾದಕರು

ಬಿ.ಎಸ್. ಶರ್ಫುದ್ದೀನ್

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

## ಪ್ರಕಾಶಕರ ಮಾತು

"ಇಸ್ಲಾಮ್ ಖಡ್ಗದ ಮೂಲಕ ಪ್ರಚಾರಗೊಂಡಿತು ಎಂಬುದು ಪಾಶ್ಚಾತ್ಯರು ಇಸ್ಲಾಮ್ ಧರ್ಮದ ಮೇಲೆ ಹೊರಿಸುವ ಒಂದು ಪ್ರಬಲ ಆರೋಪ. ಆದರೆ ಇಸ್ಲಾಮಿಗೆ ತನ್ನದೆ ಆದ ಒಂದು ಆಕರ್ಷಕ ಶಕ್ತಿಯಿದೆ. ಅದರಿಂದಲೇ ಇಸ್ಲಾಮ್ ಲೋಕದಾದ್ಯಂತ ಪಸರಿಸಿತು ಎಂಬುದು ಒಂದು ಐತಿಹಾಸಿಕ ಸತ್ಯವಾಗಿದೆ. ಇಸ್ಲಾಮಿನ ಹರಡುವಿಕೆಗೆ ಅದರ ಸರಳ ಸುಂದರ ತತ್ವ ಸಿದ್ಧಾಂತಗಳೇ ಕಾರಣವಾಗಿದೆ. ಯಾವ ದರ್ಜೆಯ ಮನುಷ್ಯನನ್ನೂ ಸುಲಭದಲ್ಲಿ ವಶೀಕರಿಸುವಂತಹ ಕಾಂತ ಶಕ್ತಿ ಇಸ್ಲಾಮಿಗಿದೆ.

ಆರನೆಯ ಶತಮಾನದಲ್ಲಿ ಉದಯವಾದ ಇಸ್ಲಾಮ್ ಅರ್ಧ ಶತಮಾನದೊಳಗೆ ಅರ್ಧ ಜಗತ್ತನ್ನು ತನ್ನ ಅಧೀನಗೊಳಿಸಿದುದು ಒಂದು ಪವಾಡವೇ ಸರಿಯೆಂದು ನಿಷ್ಪಕ್ಷಮತಿಗಳಾದ ಇತಿಹಾಸಗಾರರು ದಾಖಲಿಸಿದ್ದಾರೆ. ಇಸ್ಲಾಮಿನ ತತ್ವಚಿಂತನೆಗಳು ಮಾತ್ರ ಇಸ್ಲಾಮಿನ ಪ್ರಚಾರಕ್ಕೆ ಕಾರಣವಲ್ಲ. ಇಸ್ಲಾಮ್ ಧರ್ಮವನ್ನು ತಮ್ಮ ಜೀವನದಲ್ಲಿ ಅಳವಡಿಸುವುದರ ಜೊತೆಗೆ ಅದನ್ನು ಇತರರಿಗೆ ತಲಪಿಸಬೇಕೆಂಬ ಅದಮ್ಯ ಹಂಬಲಿಯೂ ಇದಕ್ಕೆ ಕಾರಣವಾಗಿದೆ. ಈ ಸ್ಫೂರ್ತಿ ಅಥವಾ ಚೈತನ್ಯವು ಎಲ್ಲಿಯ ವರೆಗೆ ಮುಸ್ಲಿಮರಲ್ಲಿ ಜೀವಂತವಾಗಿತ್ತೋ ಅಲ್ಲಿಯ ವರೆಗೆ ಇಸ್ಲಾಮಿನ ಪ್ರಚಾರವೂ ಅಷ್ಟೇ ವೇಗದಲ್ಲಿ ನಡೆಯಿತು. ಇತಿಹಾಸದ ಅಧ್ಯಯನದಿಂದ ಅದನ್ನು ಕಂಡು ಕೊಳ್ಳಬಹುದು.

'ಇಸ್ಲಾಮಿನ ಚೈತನ್ಯ' ಎಂಬ ಈ ಕಿರು ಕೃತಿಯು ಅದೇ ಇತಿಹಾಸದ ಅಧ್ಯಯನದ ಫಲವಾಗಿದೆ. ಮೌ| ಸೈಯದ್ ಅಬುಲ್ ಆಲಾ ಮೌದೂದಿ(ರ)ಅವರು ತಮ್ಮ ಇತಿಹಾಸದ ಅಧ್ಯಯನದಿಂದ ಕಂಡುಕೊಂಡ ಸತ್ಯವನ್ನು ಈ ಕೃತಿಯಲ್ಲಿ ವಾಚಕರ ಮುಂದಿರಿಸಿದ್ದಾರೆ. ಇದು ಸೈಯದ್ ಮೌದೂದಿ(ರ) ಅವರ ಆರಂಭ ಕಾಲದ ಲೇಖನಗಳ ಸಮಾಹಾರವಾಗಿದೆ. ಅವರ ಜೀವಿತ ಕಾಲದಲ್ಲಿ ಪುಸ್ತಕ ರೂಪದಲ್ಲಿ ಪ್ರಕಟವಾಗದೆ ಉಳಿದಿದ್ದ ಈ ಲೇಖನಗಳನ್ನು ಅವರ ಕಾಲಾ ನಂತರ ಅವರ ನಿಷ್ಠಾವಂತ ಸಂಗಾತಿಗಳಿಬ್ಬರು ಕ್ರೋಢೀಕರಿಸಿದರು. 'ಇಸ್ಲಾಮ್ ಸರ್ಚಶ್ಮಯೆ ಕುವ್ವತ್' ಎಂಬ ಹೆಸರಿಂದ ಉರ್ದುವಿನಲ್ಲಿ ಪುಸ್ತಕ ರೂಪದಲ್ಲಿ ಪ್ರಕಟವಾದ ಲೇಖನ ಮಾಲೆಯ ಕನ್ನಡಾನುವಾದವೇ ಈ ಕೃತಿ. ಇಸ್ಲಾಮ್, ಜಿಹಾದ್ ಎಂಬಿತ್ಯಾದಿ ಪದಗಳು ಪ್ರಶ್ನಾರ್ಥಕವಾಗಿರುವ ಇಂದಿನ ಪರಿಸ್ಥಿತಿಯಲ್ಲಿ ಇಸ್ಲಾಮಿನ ಪ್ರಚಾರಕ್ಕೆ ಐತಿಹಾಸಿಕ ಕಾರಣಗಳೇನು ಎಂಬುದನ್ನು ತಿಳಿದುಕೊಳ್ಳಲು ಈ ಕೃತಿ ಪ್ರಸ್ತುತವಾಗಿದೆ. ವಾಚಕರು ಇದರ ಪ್ರಯೋಜನ ಪಡೆಯ ಬಹುದೆಂದು ಹಾರೈಸುತ್ತೇವೆ.

**ಶಾಂತಿ ಪ್ರಕಾಶನ**

# ಅನುಕ್ರಮಣಿಕೆ



....................

# ಪ್ರಸ್ತಾವನೆ

ಇದು ಇಸ್ಲಾಮೀ ಜಗತ್ತಿನ ಸುಪ್ರಸಿದ್ಧ ಚಿಂತಕ ಮತ್ತು ಲೇಖಕರಾದ ಮೌಲಾನಾ ಸೈಯದ್ ಅಬುಲ್ ಅಲಾ ಮೌದೂದಿಯವರ(ರ) 'ಅಲ್‌ಜಮ್‌ಇಯ್ಯತ್' (ದೆಹಲಿ) ಪತ್ರಿಕೆಯಲ್ಲಿ ಪ್ರಕಟವಾದ ಲೇಖನ ಮಾಲೆಯ ಸಂಕಲನವಾಗಿದೆ. 1925ರಲ್ಲಿ ಪ್ರಸ್ತುತ ಪತ್ರಿಕೆಯ ಅನೇಕ ಸಂಚಿಕೆಗಳಲ್ಲಿ ಮೌಲಾನಾರು ತಮ್ಮ ಸಂಪಾದಕೀಯದಲ್ಲಿ ಇದನ್ನು ಬರೆದಿದ್ದರು. ಮೌಲಾನಾರು ಆಗ 'ಅಲ್‌ಜಮ್‌ಇಯ್ಯತ್' ಪತ್ರಿಕೆಯ ಸಂಪಾದಕರಾಗಿದ್ದರು. ಆಗ ಅವರಿಗಿನ್ನೂ ಇಪ್ಪತ್ತೆರಡು ವರ್ಷ ಪ್ರಾಯ. ಎಳೆಯ ಪ್ರಾಯದ ಹೊರತಾಗಿಯೂ ಈ ಲೇಖನದಲ್ಲಿ ಆಳವಾದ ಚಿಂತನೆ ಮತ್ತು ದೃಷ್ಟಿಕೋನ ಹಾಗೂ ಪ್ರಬುದ್ಧತೆ ಕಂಡು ಬರುತ್ತದೆ. ಮುಂದೆ ಜ್ಞಾನದ ರಂಗದಲ್ಲಿ ಒಬ್ಬಂಟಿಯಾಗಿ ಇಸ್ಲಾಮೀ ಚಿಂತನೆಯ ವಿಶ್ವಕೋಶವಾಗಿ ಹಾಗೂ ಕರ್ಮರಂಗದಲ್ಲಿ ಇಸ್ಲಾಮಿನ ಪುನರುತ್ಥಾನದ ಕಲಿಯಾಗಿ ರೂಪುಗೊಳ್ಳಬೇಕಾಗಿದ್ದ ಈ ವ್ಯಕ್ತಿಗೆ ಇದು ಪ್ರಕೃತಿಯ ವಿಶೇಷ ಕೊಡುಗೆಯಾಗಿತ್ತು.

ಈ ಅಮೂಲ್ಯ ಲೇಖನಗಳು ಅರೆಶತಮಾನದಿಂದ 'ಅಲ್‌ಜಮ್‌ಇಯ್ಯತ್' ಪತ್ರಿಕೆಯ ಹಳೆಯ ಕಡತಗಳಲ್ಲಿ ಸುಪ್ತವಾಗಿದ್ದುವು. ಕರಾಚಿಯ ಶಹೀರ್ ನಿಯಾಝಿ ಮತ್ತು ಲಾಹೋರಿನ ಹಫೀಝುರ್ರಹ್ಮಾನ್‌ರ ಪ್ರಯತ್ನಗಳ ಫಲವಾಗಿ ಹುದುಗಿಹೋಗಿದ್ದ ಈ ಸಂಪತ್ತು ಬೆಳಕಿಗೆ ಬಂತು ಮತ್ತು ಪುಸ್ತಕದ ರೂಪದಲ್ಲಿ ಪ್ರಕಟವಾಯಿತು. ಇದಕ್ಕಾಗಿ ನಿಜವಾಗಿ ಅವರಿಬ್ಬರೂ ಅಭಿನಂದನಾರ್ಹರು. ಈ ಮಹಾನುಭಾವರಿಗೆ ಕೃತಜ್ಞತೆ ಸಲ್ಲಿಸುತ್ತಾ ನಮ್ಮ ದೇಶದ ಜ್ಞಾನಾಸಕ್ತರಿಗಾಗಿ ಇದನ್ನು ಪ್ರಕಟಿಸಲಾಗುತ್ತಿದೆ.

ಮೌಲಾನಾ ಮೌದೂದಿಯವರ ಮೇರು ಗ್ರಂಥವಾದ 'ಅಲ್‌ಜಿಹಾದ್ ಫಿಲ್ ಇಸ್ಲಾಮ್' (1927) ಅವರ ಚೊಚ್ಚಲ ಕೃತಿಯೆನಿಸಿಕೊಂಡಿದೆ. ವಿಧ್ಯುಕ್ತ ಮತ್ತು ಸ್ಥಿರ ಬರಹದ ಆಧಾರದಲ್ಲಿ ನೋಡುವುದಾದರೆ ಅದೇ ಅವರ ಮೊದಲ ಕೃತಿಯಾಗಿದೆ. ಆದರೆ ವಿಧ್ಯುಕ್ತತೆ ಮತ್ತು ಸ್ಥಿರತೆಯ ಮಾನದಂಡವನ್ನು ಹೊರತು ಪಡಿಸಿ ನೋಡುವುದಾದರೆ 'ಇಸ್ಲಾಮಿನ ಚೈತನ್ಯ' ಎಂಬ ಈ ಕೃತಿಯೇ ಅವರ ಮೊದಲ ಕೃತಿಯೆನಿಸಿಕೊಳ್ಳುತ್ತದೆ. ಮಾತ್ರವಲ್ಲ 'ಅಲ್‌ಜಮ್‌ಇಯ್ಯತ್' ಪತ್ರಿಕೆಯ ಹಳೆಯ ಕಡತಗಳಲ್ಲಿ ಅಥವಾ ಅದಕ್ಕಿಂತ ಮೊದಲು ಮೌಲಾನಾರು ಸಂಪಾದಕರಾಗಿದ್ದ ಜಬಲ್ಪುರದ 'ತಾಜ್ ಪತ್ರಿಕೆ' ಅಥವಾ ದೆಹಲಿಯ 'ಮುಸ್ಲಿಮ್ ಪತ್ರಿಕೆ'ಯ ಹಳೆ ಕಡತಗಳಲ್ಲಿ ಹುಡುಕಾಡಿದರೆ ಅವರ ಯಾವುದಾದರೊಂದು ಲೇಖನ ಮಾಲೆ ಬೆಳಕಿಗೆ ಬರಬಹುದು. ಅದನ್ನು ಪುಸ್ತಕ ರೂಪದಲ್ಲಿ ಪ್ರಕಟಿಸಲಾದಾಗ ಅದು ಅವರ 'ಮೊದಲ ಕೃತಿ' ಎಂಬ ಹೆಗ್ಗಳಿಕೆಯನ್ನು ಗಳಿಸಿಕೊಳ್ಳಲೂ ಬಹುದು. ಮೌಲಾನಾರಂತಹ ಮಹಾನ್ ಚಿಂತಕರ ಒಂದೊಂದು ವಾಕ್ಯದ ಬಗ್ಗೆಯೂ ಅನ್ವೇಷಣೆ ನಡೆಯುತ್ತದೆ. ಆದ್ದರಿಂದ ಅವರ ಅತ್ಯಂತ ಹಳೆಯ ಬರಹಗಳು ಬೆಳಕಿಗೆ ಬಂದರೆ ಅಚ್ಚರಿಯಿಲ್ಲ.

ಭಾರತ ಉಪಖಂಡದಲ್ಲಿ 'ಶುದ್ಧಿ' ಚಳವಳಿ ತೀವ್ರ ಸ್ವರೂಪದಲ್ಲಿ ನಡೆಯುತ್ತಿದ್ದ ಕಾಲದಲ್ಲಿ ಈ ಲೇಖನಗಳನ್ನು ಬರೆಯಲಾಗಿದೆ. ಆಗ ಅತ್ಯಂತ ಪ್ರಕ್ಷುಬ್ಧ ವಾತಾವರಣವಿತ್ತು. ಧಾರ್ಮಿಕ ದೃಷ್ಟಿಕೋನದಿಂದ ಪರಿಸ್ಥಿತಿ ಅತ್ಯಂತ ಗೊಂದಲಮಯವಾಗಿತ್ತು. ಈ ಪುಸ್ತಕವನ್ನು ಓದುವ ವೇಳೆ ಆಗಿನ ಪರಿಸ್ಥಿತಿಯನ್ನೂ ಗಮನದಲ್ಲಿಟ್ಟು ಕೊಳ್ಳಬೇಕಾಗಿದೆ. ಈ ಪುಸ್ತಕವನ್ನು ಓದಿದಾಗ ಲೇಖಕರು ಇಸ್ಲಾಮಿನ ನೈಜ ಶಕ್ತಿ ಚಿಲುಮೆ ಯಾವುದೆಂದು ಸರಿಯಾಗಿ ಬೆಟ್ಟು ಮಾಡಿರುವುದು ವ್ಯಕ್ತವಾಗುತ್ತದೆ. ಮಾತ್ರವಲ್ಲ ಅವರಲ್ಲಿ ಆರಂಭದಿಂದಲೇ ಚಿಂತನ ಸರಣಿಯೊಂದು ರೂಢಮೂಲವಾಗಿತ್ತೆಂದು ವೇದ್ಯವಾಗುತ್ತದೆ. ಅನಂತರ ಕಾಲದಲ್ಲಿ ಅವರು ಲೇಖಕ, ಚಿಂತಕ, ವಾಗ್ಮಿ ಮತ್ತು ವ್ಯಾಖ್ಯಾನಕಾರರೆಂಬ ನೆಲೆಯಲ್ಲಿ ಲೋಕದ ಮುಂದೆ ಸವಿವರವಾಗಿ ಮತ್ತು ಸಾಧಾರವಾಗಿ ಪ್ರಸ್ತುತಪಡಿಸಿದ ವಿಚಾರಗಳು ಸಂಕ್ಷಿಪ್ತ ರೂಪದಲ್ಲಿ ಅವರ ಸುಪ್ತ ಪ್ರಜ್ಞೆಯಲ್ಲಿ ಮೊದಲಿನಿಂದಲೇ ಲೀನವಾಗಿತ್ತು. ಅವರ ದೃಷ್ಟಿಗೆ ಆರಂಭದಿಂದಲೇ ತಲುಪಬೇಕಾದ ಗುರಿಯ ಅರಿವಿತ್ತು ಎಂದು ಇದರಿಂದ ವ್ಯಕ್ತವಾಗುತ್ತದೆ. 'ಇದು ಅಲ್ಲಾಹನ ಅನುಗ್ರಹ, ಇದನ್ನವನು ತಾನಿಚ್ಛಿಸಿದವರಿಗೆ ದಯಪಾಲಿಸುತ್ತಾನೆ'

(ಪವಿತ್ರ ಕುರ್‌ಆನ್- 62: 4)

ಸದ್ರುದ್ದೀನ್ ಇಸ್ಲಾಹೀ
ಮಾರ್ಚ್ 4, 1974

ಅಧ್ಯಾಯ-1

# ಸಂದೇಶ ಪ್ರಚಾರ ಮತ್ತು ಮುಸ್ಲಿಮರ ಆಸಕ್ತಿ

ಕೆಲವು ನವ ಮುಸ್ಲಿಮ್ ಸಮುದಾಯಗಳಲ್ಲಿ ಮರು ಮತಾಂತರದ ಪಿಡುಗು ಕರಡಿರುವಂದಿನಿಂದ ಭಾರತದ* ಮುಸ್ಲಿಮರು ಕ್ರಿಯಾಶೀಲರಾಗಿದ್ದಾರೆ. ಎಲ್ಲೆಡೆ ಧರ್ಮ ಪ್ರಚಾರ ಮತ್ತು ಇಸ್ಲಾಮಿನ ಪ್ರಸರಣದ ಕೂಗು ಕೇಳಿ ಬರುತ್ತಿದೆ. ವಿವಿಧ ಸಮೂಹಗಳು ಈ ಕಾರ್ಯವನ್ನು ಕೈಗೆತ್ತಿ ತಮ್ಮ ಶಕ್ತ್ಯಾನುಸಾರ ಸತ್ಯಧರ್ಮದ ಸೇವೆಗೆಯ್ಯುತ್ತಿದ್ದಾರೆ. ಪತ್ರಿಕೆ ಮತ್ತು ನಿಯತಕಾಲಿಕಗಳಲ್ಲಿ ಅದರ ಪ್ರಾಮುಖ್ಯತೆಯ ಕುರಿತು ಬಿಸಿ ಬಿಸಿ ಚರ್ಚೆ ನಡೆಯುತ್ತಿದೆ. ಧರ್ಮ ಪ್ರಚಾರದ ಸಾಧನಾನುಕೂಲತೆಗಳ ಕುರಿತು ಅನ್ವೇಷಣೆ ನಡೆಸಲು ಸಮಾರಂಭಗಳು ನಡೆಯುತ್ತಿವೆ. ಒಟ್ಟಿನಲ್ಲಿ ಮುಸ್ಲಿಮರಲ್ಲಿ ಧರ್ಮ ಪ್ರಚಾರದ ಹೊಸ ಹುರುಪು ಜಾಗೃತವಾದಂತೆ ಭಾಸವಾಗುತ್ತಿದೆ. ಈ ಸಮಸ್ಯೆಯ ಕಡೆಗೆ ದೃಷ್ಟಿ ಬೀರಿದಾಗ ಇಂದಿನ ಮುಸ್ಲಿಮರು ನೈಜ ಧರ್ಮ ಪ್ರಚಾರಾಸಕ್ತಿಯಿಂದ ಮುಕ್ತರಾಗಿದ್ದಾರೆಂದು ವ್ಯಕ್ತವಾಗುತ್ತದೆ. ಒಂದು ಕಾಲದಲ್ಲಿ ಈ ಧರ್ಮ ಪ್ರಚಾರಾಸಕ್ತಿ ಇಸ್ಲಾಮಿನ ವಿಜಯ ಶಕ್ತಿಗಳ ಪ್ರೇರಕವಾಗಿತ್ತು. ಇಸ್ಲಾಮಿನ ಸಾರ್ವತ್ರಿಕತೆ ಮತ್ತು ಲೋಕ ಪ್ರಿಯತೆಗೆ ಅದು ಅತ್ಯಂತ ಪ್ರಬಲ ಅಸ್ತ್ರವಾಗಿ ಪರಿಣಮಿಸಿತ್ತು. ಇಂದು ಅದೇ ಸ್ಫೂರ್ತಿ ನಮ್ಮಲ್ಲಿರುತ್ತಿದ್ದರೆ ಪ್ರಾಯಶಃ ಇಂದು ನಡೆಯುತ್ತಿರುವ ಸಭೆ ಸಮಾರಂಭಗಳ, ಅವಶ್ಯಕತೆ ತಲೆದೋರುತ್ತಿರಲಿಲ್ಲ. ಅನ್ಯರ ಕಿರುಕುಳದಿಂದ ನಮ್ಮ ಮನೆಗಳಲ್ಲಿ ದುಃಖದ ಛಾಯೆ ಆವರಿಸುವ ಬದಲು ಪರರ ಸಮೂಹಗಳಲ್ಲಿ ಬೆಳೆಯುತ್ತಿರುವ ನಮ್ಮ ಧರ್ಮದ ಶಕ್ತಿಯನ್ನು ಕಂಡು ಗೊಂದಲ ಉಂಟಾಗಬೇಕಾಗಿತ್ತು. ಹೀಗೆ ಸ್ವರ ವೆಬ್ಬಿಸುತ್ತಿರುವವರು ಇಸ್ಲಾಮ್ ಧರ್ಮದ ಅನುಯಾಯಿಗಳು ಎಂದು ಆಲೋಚಿಸುವಾಗ ನಮಗೆ ಆತ್ಯಾಶ್ಚರ್ಯವಾಗುತ್ತದೆ. ಏಕೆಂದರೆ ಒಳಿತಿನೆಡೆಗೆ ಆಹ್ವಾನಿಸುವುದು ಮತ್ತು ದೇವಧರ್ಮದ ಸಂದೇಶ ನೀಡುವುದು ಒಂದು ಕರ್ತವ್ಯ ಮತ್ತು ಅನಿವಾರ್ಯ ಅಂಶದ ರೂಪದಲ್ಲಿ ಈ ಧರ್ಮದ ಮೂಲದಲ್ಲೇ ಸೇರಿಕೊಂಡಿದೆ. ಇಸ್ಲಾಮಿನ ಸಂದೇಶವಾಹಕರಾದ ಪ್ರವಾದಿವರ್ಯರು ದೇವನ ಅಂತಿಮ ಸಂದೇಶವನ್ನು ಅವನ ದಾಸರಿಗೆ ತಲಪಿಸಲಿಕ್ಕಾಗಿ ತಮ್ಮ ಇಡೀ ಜೀವನವನ್ನು ಮುಡಿಪಾಗಿಟ್ಟಿದ್ದರು. ಅವರ ಪಾವನ ಅನುಯಾಯಿಗಳು ಒಂದು ಶತಮಾನದೊಳಗೆ ಶಾಂತ ಸಾಗರದ ತೀರಗಳಿಂದ ಅಟ್ಲಾಂಟಿಕ್ ಸಾಗರದ ತೀರ ಪ್ರದೇಶಗಳ ತನಕ ಸತ್ಯ ವಚನವನ್ನು ಪ್ರಚುರ ಪಡಿಸಿದರು. ಆದ್ದರಿಂದ ಇತರರನ್ನು ಕಂಡು ಗಲಿಬಿಲಿ ಗೊಳ್ಳುವುದನ್ನು ನೋಡಿದರೆ, ಇದು ಅದೇ ಧರ್ಮದ ಅನುಯಾಯಿಗಳೋ ಅಥವಾ ಬನೀ ಇಸ್ರಾಈಲರಂತೆ ಪ್ರವಾದಿಗಳು ಗತಿಸಿ ಹೋದ ಬಳಿಕ ಇವರು ಹೊಸ ಧರ್ಮವನ್ನು ಸೃಷ್ಟಿಸಿಕೊಂಡರೋ ಎಂದು ಚಿಂತಿಸಲು ನಾವು ನಿರ್ಬಂಧಿತರಾಗುತ್ತೇವೆ.

---

*ಭಾರತವೆಂದರೆ ಅವಿಭಜಿತ ಭಾರತ. ಏಕೆಂದರೆ ಇದನ್ನು 1925ರಲ್ಲಿ ಬರೆಯಲಾಗಿದೆ.

ನಮ್ಮ ನಾಲಗೆಯಲ್ಲೀಗ ಧರ್ಮ ಪ್ರಚಾರದ ಜಪಮಂತ್ರವಿದೆ. ಧರ್ಮ ಪ್ರಚಾರಕ್ಕಾಗಿ ನಾವು ಸಂಘಟನೆಗಳನ್ನು ಕಟ್ಟಿ ರಂಗಕ್ಕಿಳಿಯ ಬಯಸುತ್ತೇವೆ. ಇಸ್ಲಾಮಿನ ಅನುಯಾಯಿಗಳು ಕ್ರೈಸ್ತ ಮಿಶನರಿಗಳಂತೆ ಸಂಘಟನೆಗಳನ್ನು ಕಟ್ಟಲು ಪ್ರಯತ್ನಿಸುತ್ತಿರುವುದು ಪ್ರಾಯಶ ಇಸ್ಲಾಮೀ ಚರಿತ್ರೆಯ ಮೊದಲ ಉದಾಹರಣೆಯಾಗಿದೆ. ಧರ್ಮ ಪ್ರಚಾರದ ಬಗ್ಗೆ ಈ ರೀತಿ ಗುಲ್ಲೆಬ್ಬಿಸಲಾಗುತ್ತಿರುವುದು ಕೂಡ ಇದು ಮೊದಲ ಬಾರಿಯಾಗಿದೆ. ಸಂಘಟನೆಗಳನ್ನು ಕಟ್ಟಿ ಆ ಬಗ್ಗೆ ಗುಲ್ಲೆಬ್ಬಿಸಲಾಗುವುದೇ ಯಶಸ್ಸಿನ ಸಂಕೇತವಾಗಿರುತ್ತಿದ್ದರೆ ಪ್ರಾಯಶಃ ನಮ್ಮ ಸಾಧನೆ ನಮ್ಮ ಪೂರ್ವಜರುಗಳಿಗಿಂತ ಹೆಚ್ಚಿರಬೇಕಾಗಿತ್ತು. ಆದರೆ ಈ ಎಲ್ಲಾ ಸಾಧನಾನುಕೂಲತೆಗಳ ಜತೆಗೆ ನಾವು ನಿರಂತರ ಹಿಂದಡಿಯಿಡುತ್ತಿರುವುದು ಕಂಡು ಬರುತ್ತದೆ. ಆದರೆ ಯಾವುದೇ ಸಾಧನಾನುಕೂಲತೆಗಳ ವಿನಾ ನಮ್ಮ ಪೂರ್ವಜರು ಯಶಸ್ಸನ್ನು ಕರಗತಮಾಡಿಕೊಂಡಿದ್ದರು ಆ ಕಾರಣದಿಂದಲೇ ಇಂದು ಲೋಕದ ಎಲ್ಲಾ ಮೂಲೆಗಳಲ್ಲಿ ಇಸ್ಲಾಮಿನ ಅನುಯಾಯಿಗಳು ಕಂಡು ಬರುತ್ತಾರೆ. ಭಾರತದಲ್ಲೇ ನಮ್ಮ ಜನಸಂಖ್ಯೆ 7 ಕೋಟಿಗೆ ತಲಪಿದೆ(ಇದು 1925ರ ಅಂಕಿ ಅಂಶ). ಹಾಗಾದರೆ ನಮ್ಮಲ್ಲಿ ಯಾವ ವಿಷಯದ ಕೊರತೆಯಿದೆ ಮತ್ತು ಇಸ್ಲಾಮಿನ ಪ್ರಚಾರದ ಒಳಗುಟ್ಟೇನು ಎಂದು ನಾವು ಯೋಚಿಸಬೇಕಾಗಿದೆ.

ಇಂದು ಮುಸ್ಲಿಮರಲ್ಲಿ ಕಂಡು ಬರುವ ದೌರ್ಬಲ್ಯಗಳಿಗೆ ಏಕೈಕ ಕಾರಣವೇನೆಂದರೆ ಅವರಿಂದ ನೈಜ ಇಸ್ಲಾಮೀ ಸ್ಫೂರ್ತಿ ಹೊರಟು ಹೋಗಿದೆ. ಮುಸ್ಲಿಮರೆಂಬ ನೆಲೆಯಲ್ಲಿ ಅವರ ನೆಲೆಯಾವುದು ಎಂಬುದನ್ನು ಅವರು ಮರೆತು ಬಿಟ್ಟಿದ್ದಾರೆ. ಓರ್ವ ಮುಸ್ಲಿಮನ ಜೀವಿತೋದ್ದೇಶ ಮತ್ತು ಅವನ ಜೀವನದ ಪರಮೋಚ್ಚ ಲಕ್ಷ್ಯ ಯಾವುದು ಎಂದು ಅವನು ಅರಿಯ ತೊಡಗಿದರೆ ಇಸ್ಲಾಮಿನ ಪ್ರಚಾರದ ಸಮಸ್ಯೆ ತನ್ನಷ್ಟಕ್ಕೆ ಬಗೆಹರಿಯುತ್ತದೆ.

## ಮುಸ್ಲಿಮರ ಜೀವಿತೋದ್ದೇಶ

ಪ್ರೊ| ಮ್ಯಾಕ್ಸ್ ಮುಲ್ಲರ್‌ರ ಪ್ರಕಾರ ಇಸ್ಲಾಮ್ ನಿಜವಾಗಿ ಸಂದೇಶ ಪ್ರಚಾರದಲ್ಲಿ ಅಧಿಷ್ಠಿತವಾದ ಧರ್ಮವಾಗಿದೆ. ಅದು ಸಂದೇಶ ಪ್ರಚಾರದ ಬುನಾದಿಗಳಲ್ಲೇ ನೆಲೆ ನಿಂತಿದೆ ಸಂದೇಶ ಪ್ರಚಾರದ ಆಧಾರದಲ್ಲೇ ಅದು ಶಕ್ತಿ ಕುದುರಿಸಿದೆ ಮತ್ತು ಅದರ ಆಧಾರದಲ್ಲೇ ಅದು ಜೀವಂತಿಕೆ ಪಡೆದಿದೆ. ಇಸ್ಲಾಮಿನ ಬೋಧನೆಗಳ ಬಗ್ಗೆ ಅಧ್ಯಯನ ನಡೆಸಿದಾಗ ಸತ್ಯಾಹ್ವಾನ ಅದರ ಜೀವಾಳವಾಗಿದೆಯೆಂದು ತಿಳಿದು ಬರುತ್ತದೆ. ಹಾಗೆಯೇ ಮುಸ್ಲಿಮರ ಜೀವನದ ಉದ್ದೇಶವು 'ಒಳಿತಿನೆಡೆಗೆ ಆಹ್ವಾನಿಸುವುದು ಮತ್ತು ಕೆಡುಕಿನಿಂದ ತಡೆಯುವುದು ಎಂದು ವ್ಯಕ್ತವಾಗುತ್ತದೆ. ಪವಿತ್ರ ಕುರ್‌ಆನ್‌ನಲ್ಲಿ ಮುಸ್ಲಿಮರ ಜೀವಿತೋದ್ದೇಶದ ಬಗ್ಗೆ ಹೀಗೆನ್ನಲಾಗಿದೆ,

"ಮಾನವನ ಸನ್ಮಾರ್ಗದರ್ಶನ ಮತ್ತು ಸಂಸ್ಕಾರಗಳಿಗಾಗಿ ನಿಯೋಜಿಸಲಾಗಿರುವ ಅತ್ಯುತ್ತಮ ಜನಕೂಟವು ನಿಮ್ಮದಾಗಿರುತ್ತದೆ. ನೀವು ಒಳಿತಿನ ಆದೇಶವನ್ನೀಯುತ್ತೀರಿ, ಪಾಪ ಕಾರ್ಯಗಳಿಂದ ತಡೆಯುತ್ತೀರಿ ಮತ್ತು ಅಲ್ಲಾಹನ ಮೇಲೆ ವಿಶ್ವಾಸವಿರಿಸುತ್ತೀರಿ." (3: 110

ಲೋಕದಲ್ಲಿ ಮುಸ್ಲಿಮ್ ಸಮೂಹದ ಅಸ್ತಿತ್ವದ ಉದ್ದೇಶವೇನೆಂದು ವಿವರಿಸುತ್ತಾ ಪವಿತ್ರ ಕುರ್‌ಆನ್‌ನಲ್ಲಿ ಹೀಗೆನ್ನಲಾಗಿದೆ,

"ನಿಮ್ಮಲ್ಲಿ ಸತ್ಕರ್ಮದೆಡೆಗೆ ಆಹ್ವಾನಿಸುವ, ಒಳಿತನ್ನು ಆಜ್ಞಾಪಿಸುವ ಮತ್ತು ಕೆಡುಕುಗಳಿಂದ ತಡೆಯುವಂತಹ ಜನಕೂಟವೊಂದು ಇರಬೇಕಾದುದು ಅತ್ಯಗತ್ಯ." (3: 104)

ಅನೇಕ ಸಂದರ್ಭಗಳಲ್ಲಿ ಸಂದೇಶ ಪ್ರಚಾರದ ಕರ್ತವ್ಯ ನಿರ್ವಹಿಸುವ ಆದೇಶ ನೀಡುತ್ತಾ ಪವಿತ್ರ ಕುರ್‌ಆನ್ ಹೀಗೆಂದಿದೆ,

"ಓ ಪೈಗಂಬರರೇ! ಯುಕ್ತಿ ಹಾಗೂ ಸದುಪದೇಶದ ಮೂಲಕ ನಿಮ್ಮ ಪ್ರಭುವಿನ ಮಾರ್ಗಕ್ಕೆ ಜನರನ್ನು ಆಹ್ವಾನಿಸಿರಿ ಮತ್ತು ಜನರೊಂದಿಗೆ ಅತ್ಯುತ್ತಮ ರೀತಿಯಿಂದ ವಾದಿಸಿರಿ." (16: 125)

"ನನ್ನ ಎಚ್ಚರಿಕೆಯ ಭಯಪಡುವವರಿಗೆ ಈ ಕುರ್‌ಆನಿನ ಮೂಲಕ ಉಪದೇಶ ನೀಡಿರಿ" (50: 45)

"ಸರಿ (ಸಂದೇಶವಾಹಕರೇ) ನೀವು ಉಪದೇಶ ಮಾಡುತ್ತಾ ಸಾಗಿರಿ. ನೀವು ಕೇವಲ ಉಪದೇಶಕರು." (88: 21)

ಈ ಬೋಧನೆಗಳ ಪ್ರಭಾವ ಪ್ರವಾದಿವರ್ಯರ(ಸ) ಜೀವನದಲ್ಲಿ ಅತ್ಯಂತ ಗಾಢವಾಗಿತ್ತು. ಈ ಬೋಧನೆಗಳೇ ಪ್ರವಾದಿವರ್ಯರ(ಸ) ಅನುಯಾಯಿಗಳ ಜೀವನದಲ್ಲಿ ಮಹತ್ತರ ಬದಲಾವಣೆಯನ್ನುಂಟು ಮಾಡಿತ್ತು. ಅವರೆಲ್ಲರ ಪಾವನ ಜೀವನವು ಸಂದೇಶ ಪ್ರಚಾರವೇ ಮೈವೆತ್ತ ಜೀವನವಾಗಿತ್ತು. ಅವರ ನಡೆ-ನುಡಿ, ಆಚಾರ-ವಿಚಾರ ಮತ್ತು ಒಂದೊಂದು ಕೆಲಸದ ಹಿಂದೆಯೂ ಜನರನ್ನು ದೇವಮಾರ್ಗದೆಡೆಗೆ ಕರೆಯುವ ಮತ್ತು ದೇವನ ದಾಸರಿಗೆ ಸನ್ಮಾರ್ಗದಲ್ಲಿ ನಡೆಯುವ ಉಪದೇಶ ನೀಡುವ ಪರಮ ಲಕ್ಷ್ಯ ಸುಪ್ತವಾಗಿತ್ತು.

ಮುಸ್ಲಿಮರ ಜೀವನದಲ್ಲಿ ಪವಿತ್ರ ಕುರ್‌ಆನ್ ಮತ್ತು ಪ್ರವಾದಿವರ್ಯರ(ಸ) ಈ ಬೋಧನೆಗಳ ಪ್ರಭಾವ ಇದ್ದಷ್ಟು ಕಾಲ ಪ್ರತಿಯೋರ್ವ ಮುಸ್ಲಿಮನ ಜೀವನ ಓರ್ವ ಸಂದೇಶ ಪ್ರಚಾರಕನ ಜೀವನದಂತಿತ್ತು. ಅವರು ಕೈಗಾರಿಕೆ, ವ್ಯಾಪಾರ, ಕೃಷಿ, ಆಡಳಿತ ಮುಂತಾದ ಲೋಕದ ಎಲ್ಲಾ ಕೆಲಸಗಳನ್ನು ಮಾಡಿದರು. ಆದರೆ ಅದರ ಜತೆಗೆ ಅಲ್ಲಾಹನು ದಯಪಾಲಿಸಿರುವ ಇಸ್ಲಾಮಿನ ಅನುಗ್ರಹದಿಂದ ಮಾನವ ಸಮಾಜವನ್ನು ಪಾವನಗೊಳಿಸಬೇಕೆಂಬ ಅದಮ್ಯ ಆಸಕ್ತಿ ಅವರಲ್ಲಿ ಸದಾ ಜಾಗೃತವಾಗಿತ್ತು. ಇಸ್ಲಾಮ್ ಲೋಕದ ಪಾಲಿಗೆ ಅತಿದೊಡ್ಡ ಅನುಗ್ರಹವೆಂದು ಅವರು ಭಾವಿಸುತ್ತಿದ್ದರು. ಆದ್ದರಿಂದ ಪ್ರತಿಯೋರ್ವ ಮಾನವರಿಗೆ ಈ ಅನುಗ್ರಹವನ್ನು ತಲಪಿಸುವುದು ತಮ್ಮ ಕರ್ತವ್ಯವಾಗಿದೆಯೆಂದು ಅವರು ಭಾವಿಸುತ್ತಿದ್ದರು. ಆದ್ದರಿಂದಲೇ ವ್ಯಾಪಾರಿಗಳು ವ್ಯಾಪಾರ ರಂಗದಲ್ಲಿ, ಯಾತ್ರಿಕರು ಯಾತ್ರಾ ಮಾರ್ಗದಲ್ಲಿ, ಕೈದಿಗಳು ಕಾರಾಗೃಹ ವಾಸಿಗಳಲ್ಲಿ, ನೌಕರರು ತಮ್ಮ ಕಛೇರಿಗಳಲ್ಲಿ, ರೈತರು ತಮ್ಮ ಹೊಲಗಳಲ್ಲಿ ಈ ಪಾವನ ಕೆಲಸವನ್ನು ನಿರ್ವಹಿಸಿದರು. ಈ ಆಸಕ್ತಿ ಅವರಲ್ಲಿ ಎಷ್ಟು ವ್ಯಾಪಕವಾಗಿತ್ತೆಂದರೆ ಮಹಿಳೆಯರೂ ಅತ್ಯಂತ ತನ್ಮಯತೆ ಮತ್ತು ಸಕ್ರಿಯತೆಯೊಂದಿಗೆ ಈ ಕೆಲಸವನ್ನು ನಿರ್ವಹಿಸಿದರು.

## ಇಸ್ಲಾಮಿನ ನೈಜ ಶಕ್ತಿ ಚಿಲುಮೆ

ಈ ಸಂದೇಶ ಪ್ರಚಾರಾಸಕ್ತಿಯೇ ಇಸ್ಲಾಮಿನ ಶಕ್ತಿಯ ನೈಜ ಚಿಲುಮೆಯಾಗಿತ್ತು. ಇಂದು ಜಗತ್ತಿನಾದ್ಯಂತ ಕಂಡು ಬರುವ ಕೋಟಿಗಟ್ಟಲೆ ಮುಸ್ಲಿಮರು ಹಾಗೂ ವಿವಿಧ ಗೋತ್ರ, ಸಮುದಾಯ ಮತ್ತು ರಾಷ್ಟ್ರಗಳಲ್ಲಿ ಸ್ಥಾಪಿತವಾಗಿರುವ ಇಸ್ಲಾಮಿನ ಆಡಳಿತವೆಲ್ಲವು ಈ ಸಂದೇಶ ಪ್ರಚಾರಾಸಕ್ತಿಯ ಪರಿಣಾಮವಾಗಿದೆ.

ಇಸ್ಲಾಮಿನ ಶತ್ರುಗಳು ಖಡ್ಗದ ಮೂಲಕ ಇಸ್ಲಾಮ್ ಪ್ರಚಾರಗೊಂಡಿತು ಎಂದು ಆರೋಪಿಸುತ್ತಾರೆ. ಆದರೆ ಅದು ಕೇವಲ ಸಂದೇಶ ಪ್ರಚಾರದ ಮೂಲಕ ವ್ಯಾಪಕಗೊಂಡಿದೆ ಎಂಬುದು ಚರಿತ್ರೆಯಿಂದ ಸಾಬೀತಾಗುತ್ತದೆ. ಇಸ್ಲಾಮಿನ ಜೀವನ ಕೇವಲ ಖಡ್ಗದ ಮೇಲೆ ನೆಲೆ ನಿಂತಿರುತ್ತಿದ್ದರೆ ಖಡ್ಗದ ಜತೆ ಅದು ಕೊನೆಗೊಳ್ಳಬೇಕಾಗಿತ್ತು. ಈ ತನಕ ಖಡ್ಗದ ಮೂಲಕ ಇಸ್ಲಾಮಿನ ಮೇಲೆ ನಡೆದಿರುವ ಆಕ್ರಮಣದಿಂದ ಅದು ಕೊನೆಗೊಂಡು ಬಿಡುತ್ತಿತ್ತು. ಆದರೆ ಅನೇಕ ಬಾರಿ ಇಸ್ಲಾಮ್ ಖಡ್ಗಕ್ಕೆ ಮಣಿದು ತದನಂತರ ಸಂದೇಶ ಪ್ರಚಾರದ ಮೂಲಕ ಜಯಗಳಿಸಿದಂತಹ ಅನೇಕ ನಿದರ್ಶನಗಳನ್ನು ನಾವು ಕಾಣುತ್ತೇವೆ. ಒಂದೆಡೆ ಬಾಗ್ದಾದಿನಲ್ಲಿ ಕೊಲೆ ಸುಲಿಗೆಗಳ ಸರಣಿ ಜಾರಿಯಲ್ಲಿರುವಾಗ ಇನ್ನೊಂದೆಡೆ ಸುಮಾತ್ರಾದಲ್ಲಿ ಇಸ್ಲಾಮಿ ಸರಕಾರ ಸ್ಥಾಪನೆಗೊಳ್ಳುತ್ತಿತ್ತು. ಒಂದೆಡೆ ಕಾರ್ದೋವ (ಸ್ಪೇನ್)ದಿಂದ ಇಸ್ಲಾಮಿನ ಎತ್ತಂಗಡಿ ನಡೆಯುತ್ತಿದ್ದರೆ ಇನ್ನೊಂದೆಡೆ ಜಾವಾದಲ್ಲಿ ಇಸ್ಲಾಮಿನ ಕೀರ್ತಿ ಪತಾಕೆ ಮೇಲೇರುತ್ತಿತ್ತು. ಒಂದೆಡೆ ಸಿಸಿಲಿಯಲ್ಲಿ - ಅದರ ನಾಮಾವಶೇಷದ ಪ್ರಯತ್ನ ನಡೆದಿದ್ದರೆ ಇನ್ನೊಂದೆಡೆ ಜಾವಾದಲ್ಲಿ ಅದು ಪುನರುತ್ಥಾನಗೊಂಡಿತು. ಒಂದೆಡೆ ತಾರ್ತಾರಿಗಳು ಇಸ್ಲಾಮಿನ ಕತ್ತು ಕೊಯ್ಯುತ್ತಿದ್ದರೆ ಮತ್ತೊಂದೆಡೆ ಇಸ್ಲಾಮ್ ಅವರ ಮನಗೆಲ್ಲುತ್ತಿತ್ತು. ಒಂದೆಡೆ ತುರ್ಕರು ಅದಕ್ಕೆ ದಾಸ್ಯದ ಬೇಡಿ ತೊಡಿಸುತ್ತಿದ್ದರೆ ಇನ್ನೊಂದೆಡೆ ಅರಿವಿಲ್ಲದಂತೆಯೇ ಅವರು ತಮ್ಮ ಹೃದಯಗಳನ್ನು ಇಸ್ಲಾಮಿನ ದಾಸ್ಯಕ್ಕೊಳಪಡಿಸುತ್ತಿದ್ದರು.

ಇದೆಲ್ಲವೂ ಇಸ್ಲಾಮಿನ ಸಂದೇಶ ಪ್ರಚಾರಕ್ಕೆ ದೊರೆತ ವಿಜಯವಲ್ಲದಿದ್ದರೆ ಮತ್ತೇನು? ಖಡ್ಗದಿಂದ ದೊರೆತ ವಿಜಯಗಳಾವುದೂ ಇಂದು ಬಾಕಿಯುಳಿದಿಲ್ಲ. ಸ್ಪೇನ್ ಕೊನೆಗೊಂಡಿದೆ, ಸಿಸಿಲಿ ಅಳಿಸಿ ಹೋಗಿದೆ, ಗ್ರೀಕ್ ನಾಮಾವಶೇಷವಾಗಿದೆ. ಆದರೆ ಮಧ್ಯ ಆಫ್ರಿಕಾ, ಜಾವಾ, ಸುಮಾತ್ರಾ, ಚೀನಾ, ಅಲ್‌ಜೀರಿಯಾ ಮತ್ತು ಮಲಾಯಾ ಮುಂತಾದ ಸಂದೇಶ ಪ್ರಚಾರದ ಅಸ್ತ್ರದಿಂದ ಗಳಿಸಿದ ಪ್ರದೇಶಗಳು ಇಂದಿಗೂ ಬಾಕಿಯುಳಿದಿದೆ. ಇಸ್ಲಾಮಿನ ಉಳಿವು ಸಂದೇಶ ಪ್ರಚಾರದಲ್ಲಧಿಷ್ಠಿತವಾಗಿದೆ ಎಂಬುದಕ್ಕೆ ಇದು ಸಾಕ್ಷಿಯಾಗಿದೆ. ಈ ಸಂದೇಶ ಪ್ರಚಾರ ಮಿಶನರಿ ಸಂಸ್ಥೆಗಳ ಮೂಲಕ ಮಾಡಲಾಯಿತೇ? ನಾವಿಂದು ಮಾಡುತ್ತಿರುವ ನಿರರ್ಥಕ ಸದ್ದುಗದ್ದಲದ ಮೂಲಕ ಈ ದಿಗ್ವಿಜಯಗಳನ್ನು ಸಾಧಿಸಲಾಗಿತ್ತೇ? ಲೇಖನಸಮರ, ಕಾಗದಯುದ್ಧಗಳೇ ಮುಂತಾದ ನಾವು ಕ್ರೈಸ್ತ ಮಿಶನರಿಗಳ ಅನುಸರಣೆಯಲ್ಲಿ ಅಳವಡಿಸಿರುವ ಚಟುವಟಿಕೆಗಳಿಂದ ಈ ವಿಶ್ವಮಾನ್ಯತೆ ಪ್ರಾಪ್ತವಾಗಿತ್ತೇ? ಇತಿಹಾಸ ಇದಕ್ಕೆ ನಕಾರಾತ್ಮಕ ಉತ್ತರ ನೀಡುತ್ತದೆ. ಮುಂದಿನ ಪಂಕ್ತಿಗಳಲ್ಲಿ ಈ ವಿಷಯದ ಕುರಿತೇ ಚರ್ಚಿಸಲಾಗಿದೆ.

ಅಧ್ಯಾಯ-2

# ಇಸ್ಲಾಮಿನ ಪ್ರಸರಣಕ್ಕೆ ಕಾರಣಗಳೇನು?

ವಾಸ್ತವಿಕತೆ ಮತ್ತು ಸತ್ಯಾಂಶವನ್ನು ಗಮನದಲ್ಲಿರಿಸಿ ನೋಡಿದರೆ ಇಸ್ಲಾಮಿನ ಪ್ರಸರಣದಲ್ಲಿ ಮೂರು ಅಂಶಗಳು ಸಮಾನವಾಗಿ ಪಾತ್ರವಹಿಸಿರುವುದು ಕಂಡು ಬರುತ್ತದೆ.

1) ಅದರ ಸರಳ ವಿಶ್ವಾಸ ಮತ್ತು ಮನಮೋಹಕ ಆರಾಧನಾ ಕ್ರಮಗಳು.

2) ಮುಸ್ಲಿಮರ ಜೀವನದಲ್ಲಿ ಅದರಿಂದುಂಟಾದ ವಿಸ್ಮಯಕಾರೀ ಪರಿಣಾಮಗಳು.

3) ಮುಸ್ಲಿಮರ ಸಂದೇಶ ಪ್ರಚಾರಾಸಕ್ತಿ.

ಮೊದಲನೆಯದು ಮಾನವ ಬುದ್ಧಿಯನ್ನು ಮೀಟುತ್ತದೆ. ಎರಡನೆಯದು ಮಾನವನ ಭಾವನೆಗಳನ್ನು ಬಡಿದೆಬ್ಬಿಸುತ್ತದೆ. ಮೂರನೆಯದು ಓರ್ವ ದಯಾಶೀಲ ಮಾರ್ಗದರ್ಶಿಯಂತೆ ದಾರಿ ತಪ್ಪಿದವರಿಗೆ ಸನ್ಮಾರ್ಗ ತೋರಿಸುತ್ತದೆ. ಮಾರುಕಟ್ಟೆಯಲ್ಲಿ ಯಾವುದೇ ಸರಕು ಮಾರಾಟವಾಗಬೇಕಾದರೆ ಆ ಸರಕಿನಲ್ಲಿರುವ ಒಳ್ಳೆಯ ಅಂಶಗಳೇ ಸಾಕಾಗುವುದಿಲ್ಲ. ಅದಕ್ಕೆ ಅದರ ಗುಣಗಾನ ಮಾಡುವ, ಅದರ ಪ್ರಯೋಜನಗಳನ್ನು ಸಾರಿ ಹೇಳುವ ಕಾರ್ಯಕರ್ತರ ಅವಶ್ಯಕತೆ ಇರುತ್ತದೆ. ಹಾಗೆಯೇ ಅದರ ಪ್ರಯೋಜನಗಳ ಬಗ್ಗೆ ಪ್ರಾಯೋಗಿಕ ಸಾಕ್ಷ್ಯ ನೀಡಬಲ್ಲ ವ್ಯಕ್ತಿಗಳೂ ಬೇಕಾಗುತ್ತದೆ. ಅದೇ ರೀತಿ ಇಸ್ಲಾಮಿನ ಪ್ರಚಾರಕ್ಕೂ ಈ ಮೂರು ವಸ್ತುಗಳ ಸಮಾನ ಪಾತ್ರ ಅಪೇಕ್ಷಣೀಯ. ಈ ಪೈಕಿ ಯಾವುದೇ ಅಂಶದಲ್ಲಿ ಕೊರತೆ ಗೋಚರಿಸಿದರೂ ಇಸ್ಲಾಮಿನ ಪ್ರಚಾರದ ವೇಗ ಅದರಿಂದ ಪ್ರಭಾವಿತಗೊಳ್ಳುತ್ತದೆ. ಈ ಮೂರು ಅಂಶಗಳು ಹೇಗೆ ಪಾತ್ರವಹಿಸುತ್ತವೆ ಮತ್ತು ಅವುಗಳ ಸಮ್ಮಿಶ್ರ ಪ್ರಯತ್ನದಿಂದ ಉಂಟಾಗುವ ಪ್ರಯೋಜನಗಳೇನು ಎಂಬುದು ವಿವರಣೆಯನ್ನು ಬಯಸುವಂತಹ ಅಂಶವಾಗಿದೆ.

## ಇಸ್ಲಾಮೀ ನಂಬಿಕೆಗಳ ಸರಳತೆ ಮತ್ತು ನೈಸರ್ಗಿಕತೆ

ಇಸ್ಲಾಮಿನ ನಂಬಿಕೆಗಳು ಎಷ್ಟು ಸರಳ ಮತ್ತು ಮನಮೋಹಕವಾಗಿವೆಯೆಂದರೆ ಓರ್ವ ಅತ್ಯಂತ ಸಾಮಾನ್ಯ ಬುದ್ಧಿಯುಳ್ಳ ವ್ಯಕ್ತಿಯೂ ಅದನ್ನು ಅನುಸರಿಸಲು ಸಿದ್ಧನಾಗುತ್ತಾನೆ. ಅದರ ಹಿಂದೆ ಸಂಕೀರ್ಣವಾದ ತತ್ವಶಾಸ್ತ್ರಗಳಿಲ್ಲ. ಭ್ರಮೆ ಮತ್ತು ಕುರುಡು ನಂಬಿಕೆಗಳಿಲ್ಲ. ಅಪ್ರಾಯೋಗಿಕವಾದ ಯಾವುದೇ ವಿಷಯಗಳ ಪ್ರಸ್ತಾಪವಿಲ್ಲ. ಅತ್ಯಂತ ಸರಳ ಮತ್ತು ನೇರವಾದ ತತ್ವಗಳು ಅದರ ಹಿಂದೆ ಕಾರ್ಯತತ್ಪರವಾಗಿವೆ. ಬುದ್ಧಿ ಅದನ್ನು ಸುಲಭವಾಗಿ ಗ್ರಹಿಸಿಕೊಳ್ಳುತ್ತದೆ. ಅನಂತರ ವ್ಯಕ್ತಿ ಸ್ವತಃ ತನ್ನಲ್ಲಿ ಆಶ್ಚರ್ಯಕರ ಕ್ರಾಂತಿಯುಂಟಾಗಿರುವುದನ್ನು ಮನಗಾಣತೊಡಗುತ್ತಾನೆ. ಈ ಎಲ್ಲಾ ವಿಷಯಗಳ ಜತೆಗೆ ಇಸ್ಲಾಮಿನ ಬೋಧನೆಗಳ ಮತ್ತೊಂದು ವೈಶಿಷ್ಟ್ಯವೇನೆಂದರೆ ಅವು ಅತ್ಯಂತ ಸ್ಪಷ್ಟ ಮತ್ತು ಗೊಂದಲ ರಹಿತವಾಗಿವೆ. ಅವುಗಳಲ್ಲಿ ಯಾವುದೇ ಸಂಶಯಗಳಿಗೆ ಆಸ್ಪದವಿಲ್ಲ. ದೇವನ ಕುರಿತು ಇಸ್ಲಾಮ್ ಸಮರ್ಪಿಸುವ ವಿಶ್ವಾಸ ಅತ್ಯಂತ ಸ್ಪಷ್ಟವಾಗಿದೆ-

"ನಿಮ್ಮ ದೇವನು ಏಕೈಕ ದೇವನು." (21: 108) ಇಲ್ಲಿ ಬಹುದೇವತ್ವಕ್ಕೆ ಆಸ್ಪದವೇ ಇಲ್ಲ.

"ಇಬ್ಬರು ಆರಾಧ್ಯರನ್ನು ಮಾಡಿಕೊಳ್ಳಬೇಡಿರಿ. ಆರಾಧ್ಯನಂತು ಒಬ್ಬನೇ." (16: 51)

ಅವನಿಗೆ ಯಾವುದೇ ಸಹಾಯಕರ ಅವಶ್ಯಕತೆಯಿಲ್ಲ. ಏಕೆಂದರೆ,

"ನಿಶ್ಚಯವಾಗಿಯೂ ಅಲ್ಲಾಹನು ಎಲ್ಲ ವಸ್ತುಗಳ ಮೇಲೆ ಅಧಿಕಾರ ಉಳ್ಳವನಾಗಿದ್ದಾನೆ." (3: 189)

"ತನಗಿಷ್ಟಬಂದಂತೆ ಮಾಡುವ ಅಧಿಕಾರ ಅಲ್ಲಾಹನಿಗಿದೆ." (14: 27)

"ಅಲ್ಲಾಹ್ ತಾನಿಚ್ಛಿಸುವ ಆಜ್ಞೆ ನೀಡುತ್ತಾನೆ." (5: 1)

"ಅವನಿಗೆ ಯಾವುದೇ ಸಂತಾನವಿಲ್ಲ. ಅವನು ಯಾರ ಸಂತಾನವೂ ಅಲ್ಲ ಮತ್ತು ಅವನಿಗೆ ಸರಿಸಮಾನರು ಯಾರೂ ಇಲ್ಲ." (112: 3-4)

ಯಾವುದೇ ಮಾನವ ಸಹಜ ನೈಸರ್ಗಿಕ ಬಯಕೆ ಅವನನ್ನು ಬಾಧಿಸುವುದಿಲ್ಲ.

"ಅಲ್ಲಾಹ್ ಚಿರಂತನು. ಸ್ವಯಂ ಜೀವಂತನು. ಅವನಿಗೆ ತೂಕಡಿಕೆಯಾಗಲಿ ನಿದ್ರೆಯಾಗಲಿ ಬಾಧಿಸುವುದಿಲ್ಲ." (2: 255)

ಮಾನವ ಸಹಾಯ ಯಾಚನೆಗಾಗಿ ಕೂಗಿ ಕರೆಯಲು ಭೂಮಿ-ಆಕಾಶಗಳಲ್ಲಿ ಅವನ ಹೊರತು ಬೇರಾವುದೇ ಶಕ್ತಿಯಿಲ್ಲ.

"ಭೂಮಿ-ಆಕಾಶಗಳ ಆಧಿಪತ್ಯ ಅಲ್ಲಾಹನಿಗೆ ಮಾತ್ರ ಇರುವುದೆಂದೂ ಅಲ್ಲಾಹನ ಹೊರತು ನಿಮ್ಮ ಸಂರಕ್ಷಕನೂ ಸಹಾಯಕನೂ ಯಾರೂ ಇಲ್ಲವೆಂದೂ ನಿಮಗೆ ತಿಳಿಯದೇ?" (2: 107)

ಅವನು ಮಾತ್ರವೇ ಆರಾಧನೆಗೆ ಅರ್ಹನಾದವನಾಗಿದ್ದಾನೆ.

"ನೀವು ಧರ್ಮವನ್ನು ಅಲ್ಲಾಹನಿಗೆ ಮಾತ್ರ ಮೀಸಲಿರಿಸುತ್ತಾ ಅವನ ದಾಸ್ಯ ಕೈಗೊಳ್ಳಿರಿ." (39: 2)

ಪ್ರವಾದಿಗಳ ಬಗ್ಗೆಯೂ ಅದು ದೇವಾಂಶ ಸಂಭೂತರಾಗಿರಬಹುದೆಂಬ ಸಂಶಯವನ್ನು ಅದು ಬಾಕಿಯುಳಿಸಿಲ್ಲ. ಪ್ರವಾದಿಗಳು ಕೇವಲ ಮಾನವರು ಮಾತ್ರವಾಗಿದ್ದಾರೆ ಮತ್ತು ಅವರನ್ನು ದೇವನು ತನ್ನ ದಾಸರಿಗೆ ಸಂದೇಶ ತಲಪಿಸಲಿಕ್ಕಾಗಿ ಆಯ್ಕೆ ಮಾಡಿದ್ದಾನೆ ಎಂಬ ವಿಶ್ವಾಸವನ್ನು ಅದು ಸಂಶಯಕ್ಕೆಡೆಯಿಲ್ಲದಂತೆ ಸ್ಪಷ್ಟಪಡಿಸಿದೆ.

"ಹೇಳಿರಿ, ನಾನು ನಿಮ್ಮಂತೆಯೇ ಇರುವ ಓರ್ವ ಮನುಷ್ಯ ನನ್ನೆಡೆಗೆ ದೇವವಾಣಿ ಅವತೀರ್ಣವಾಗುತ್ತದೆ." (8: 110)

"ಪ್ರತಿಯೊಂದು ಜನಾಂಗಕ್ಕೂ ಮಾರ್ಗದರ್ಶಿಯನ್ನು ಕಳುಹಿಸಲಾಗಿದೆ." (13: 7)

ಕರ್ಮ ಮತ್ತು ಅದರ ಹೊಣೆಗಾರಿಕೆಯ ಕುರಿತು ಅದು ಬಹಳ ಸ್ಪಷ್ಟವಾಗಿ ಎಚ್ಚರಿಕೆ ನೀಡಿದೆ. ಅಲ್ಲಿ ಯಾವುದೇ ಪ್ರಾಯಶ್ಚಿತ್ತ ಮತ್ತು ಪರಿಹಾರವಿಲ್ಲ.

"ಅಣುಗಾತ್ರದಷ್ಟು ಪುಣ್ಯ ಕಾರ್ಯವೆಸಗಿದವನು ಅದನ್ನು ಕಂಡೇ ತೀರುವನು ಮತ್ತು ಅಣುಗಾತ್ರದಷ್ಟು ಪಾಪಕಾರ್ಯವೆಸಗಿದವನು ಅದನ್ನು ಕಂಡೇ ತೀರುವನು." (99:8)

ಮಾನವನ ಮರುಹುಟ್ಟಿನ ಬಗ್ಗೆ ಇಸ್ಲಾಮ್ ಯಾವ ಧರ್ಮದಲ್ಲೂ ನೀಡಲಾಗಿರದಂತಹ ಅತ್ಯಂತ ಸ್ಪಷ್ಟ ಮತ್ತು ಸುವ್ಯಕ್ತ ವಿಶ್ವಾಸವನ್ನು ಸಮರ್ಪಿಸಿದೆ. ಬೌದ್ಧ ಧರ್ಮದಂತಹ ಬುದ್ಧಿಗೆ ನಿಲುಕದ ಮೋಕ್ಷದ ತತ್ವಶಾಸ್ತ್ರ ಅದರಲ್ಲಿಲ್ಲ. ವೈದಿಕ ಧರ್ಮದ ಅತ್ಯಂತ ಸಂಕೀರ್ಣವಾದ ಪುನರ್ಜನ್ಮದ ಸಿದ್ಧಾಂತವೂ ಅದರಲ್ಲಿಲ್ಲ. ನಾಸ್ತಿಕತೆಯ ಸರ್ವನಾಶದ ಸಿದ್ಧಾಂತವೂ ಅದರ ಬಳಿ ಇಲ್ಲ. ಮಾನವ ತನ್ನ ಪ್ರಸಕ್ತ ಜೀವನದ ಕರ್ಮಗಳ ಪ್ರತಿಫಲವನ್ನು ಮುಂದಿನ ಜೀವನದಲ್ಲಿ ಕಾಣುತ್ತಾನೆ ಮತ್ತು ಅದುವೇ ಅವನ ನೈಜ ಜೀವನವಾಗಿದೆ ಎಂಬ ವಿಶ್ವಾಸವನ್ನು ಇಸ್ಲಾಮ್ ಅತ್ಯಂತ ಸ್ಪಷ್ಟವಾಗಿ ಮುಂದಿರಿಸಿದೆ.

ಈ ವಿಶ್ವಾಸ ಎಷ್ಟು ಸರಳವಾದುದೆಂದರೆ ಮಾನವ ಬುದ್ಧಿ ಸುಲಭವಾಗಿ ಅದನ್ನು ಸ್ವೀಕರಿಸಿಕೊಳ್ಳುತ್ತದೆ. ಇಸ್ಲಾಮಿನ ಪ್ರಚಾರಕರು ಸದಾ ತಮ್ಮ ಬೋಧನೆಯಲ್ಲಿ ಯಶಸ್ವಿಯಾಗಲು ಕಾರಣವೇನೆಂದರೆ ಅವರು ಮಾನವ ಬುದ್ಧಿಗೆ ನಿಲುಕದಂತಹ ಯಾವುದೇ ಗೊಂದಲಕಾರಿ ವಿಷಯವನ್ನು ಮುಂದಿಡುವುದಿಲ್ಲ. ಖ್ಯಾತ ಫ್ರೆಂಚ್ ದಾರ್ಶನಿಕ ಪ್ರೊಫೆಸರ್ ಮ್ಯಾಂಟೇಟ್ ಈ ವಿಶ್ವಾಸಗಳ ಕುರಿತು ಹೀಗೆ ಬರೆಯುತ್ತಾನೆ,

"ಅತ್ಯಂತ ಸ್ಪಷ್ಟವಾದ ಗೊಂದಲಮಯ ತತ್ವಶಾಸ್ತ್ರಗಳಿಂದ ಮುಕ್ತವಾದ ಮತ್ತು ಸಹಜ ಬುದ್ಧಿಗೂ ನಿಲುಕುವಂತಹ ನಂಬಿಕೆಯಲ್ಲಿ ಮಾನವ ಮನಸ್ಸನ್ನು ಸೂರೆಗೊಳ್ಳಬಲ್ಲ ಮಾಂತ್ರಿಕ ಶಕ್ತಿಯಿರುತ್ತದೆ. ನಿಜವಾಗಿ ಈ ವಿಶ್ವಾಸದಲ್ಲಿ ಅಂತಹುದೇ ಶಕ್ತಿಯಿದೆ."

ಮಾನವ ಬುದ್ಧಿಯ ಮೇಲೆ ಈ ವಿಶ್ವಾಸದಿಂದ ಎಂತಹ ಗಾಢ ಪರಿಣಾಮ ಉಂಟಾಗುತ್ತದೆಂದು ಈ ಕೆಳಗೆ ಪ್ರಸ್ತಾವಿಸಲಾಗುವ ಘಟನೆಯಿಂದ ಸುಲಭವಾಗಿ ಗ್ರಹಿಸಿಕೊಳ್ಳಬಹುದು -

ಒಮ್ಮೆ ಐರೋಪ್ಯ ಯಾತ್ರಿಕನೊಬ್ಬ ಆಫ್ರಿಕಾದ ಗಾಲಾ ಸಮುದಾಯದ ಓರ್ವ ಸ್ವತಂತ್ರ ಗುಲಾಮನನ್ನು ಭೇಟಿಯಾದ. ಅವನನ್ನು ಬಾಲ್ಯದಲ್ಲಿ ಝುಂಜ್ ತೀರ ಪ್ರದೇಶದಲ್ಲಿ ಸೆರೆ ಹಿಡಿದು ಜಿದ್ದಾದಲ್ಲಿ ಮಾರಲಾಗಿತ್ತು. ಐರೋಪ್ಯ ಯಾತ್ರಿಕ ಅವನೊಡನೆ, "ನಿನ್ನನ್ನು ಅನ್ಯಾಯವಾಗಿ ಸೆರೆಹಿಡಿದು ಪ್ರಾಣಿಯಂತೆ ಮಾರಾಟ ಮಾಡಿದವರ ಬಗ್ಗೆ ನಿನಗೆ ದ್ವೇಷವಿಲ್ಲವೇ?" ಎಂದು ಕೇಳಿದನು. ಅದಕ್ಕುತ್ತರವಾಗಿ ಆ ನೀಗ್ರೋ ಗುಲಾಮ ಹೀಗೆ ಉತ್ತರಿಸಿದನು-

"ಹೌದು, ಸಹಜವಾಗಿಯೇ ನನ್ನ ಹೃದಯದಲ್ಲಿ ಅವರ ಬಗ್ಗೆ ದ್ವೇಷವಿದೆ. ಆದರೆ ಒಂದು ವಿಷಯದಿಂದ ಅದರ ನಿವಾರಣೆಯಾಯಿತು. ಅದೇನೆಂದರೆ ಅವರಿಂದಾಗಿ ನಾನು ಸತ್ಯನಿಷೇಧದಿಂದ ಮತ್ತು ಅಜ್ಞಾನದಿಂದ ಹೊರಬಂದೆ. ನಾನು ಈ ದೇಶಕ್ಕೆ ಬರುವಂತಾದುದು ಮತ್ತು ಆ ಮೂಲಕ ನನಗೆ ಇಸ್ಲಾಮಿನ ಸೌಭಾಗ್ಯ ಲಭ್ಯವಾಗಿರುವುದು ಅಲ್ಲಾಹನ ಅತಿ ದೊಡ್ಡ ಅನುಗ್ರಹವೆಂದು ನಾನು ಭಾವಿಸುತ್ತೇನೆ. ಸತ್ಯವಿಶ್ವಾಸಕ್ಕಿಂತ ಮಿಗಿಲಾದ ರೋಚಕ ವಸ್ತು ಬೇರಾವುದೂ ಇಲ್ಲ. ಈ ರುಚಿಯನ್ನು ಕೇವಲ ಅನುಭೋಗಿಸಲು ಸಾಧ್ಯವೇ ಹೊರತು ನಾಲಗೆಯ ಮೂಲಕ ವರ್ಣಿಸಲು ಸಾಧ್ಯವಿಲ್ಲ."

## ಇಸ್ಲಾಮೀ ಆರಾಧನೆಗಳಲ್ಲಿರುವ ಆಕರ್ಷಣೆ

ಇಸ್ಲಾಮೀ ಆರಾಧನಾ ಕರ್ಮಗಳೂ ಅಷ್ಟೇ. ಅದರಲ್ಲಿ ಎಷ್ಟು ಆಕರ್ಷಣೆ ಮತ್ತು ಸೆಳೆತವಿದೆಯೆಂದರೆ, ಮಾನ್ಸೆಸ್ಕ್ಯೂ ಎಂಬ ಚಿಂತಕ ಹೇಳುವಂತೆ ಯಾವ ಹೃದಯವು ಅದರಿಂದ ಪ್ರಭಾವಿತವಾಗದೆ ಇರಲಾರದು. ಅಲೆಕ್ಸಾಂಡ್ರಿಯಾದ ಯಹೂದಿಯೊಬ್ಬ ಹೀಗೆ ಬರೆಯುತ್ತಾನೆ,

"ನಾನು ಕೇವಲ ಮುಸ್ಲಿಮರ ಆರಾಧನಾ ಕರ್ಮಗಳನ್ನು ನೋಡಿ ಮುಸ್ಲಿಮನಾಗಿದ್ದೇನೆ ಒಮ್ಮೆ ನಾನು ಜಾಮಿಆ ಮಸೀದಿಯಲ್ಲಿ ನಮಾಝಿನ ದೃಶ್ಯವನ್ನು ನೋಡುತ್ತಿದ್ದೆ. ನನ್ನ ಮೇಲೆ ಅತ್ಯಂತ ಹೆಚ್ಚು ಪ್ರಭಾವ ಬೀರಿದ ವಿಷಯವೆಂದರೆ ಶುಕ್ರವಾರದ ಪ್ರವಚನ. ಪ್ರವಚನದ ಒಂದೊಂದು ಪದವೂ ನನ್ನ ಮೇಲೆ ಪ್ರಭಾವ ಬೀರುತ್ತಿತ್ತು. ವಿಶೇಷವಾಗಿ ಪ್ರವಚನಕಾರ ಎಚ್ಚರಿಸಿದ ಕುರ್‌ಆನ್‌ನ ವಾಕ್ಯವೊಂದರಿಂದ ನಾನು ಅತ್ಯಂತ ಪ್ರಭಾವಿತನಾದೆ"

"ಅಲ್ಲಾಹ್ ನ್ಯಾಯ, ಪರೋಪಕಾರ ಹಾಗೂ ಆಪ್ತೇಷ್ಟರ ಬಗ್ಗೆ ಸೌಜನ್ಯದ ಆದೇಶ ನೀಡುತ್ತಾನೆ ಮತ್ತು ಅಶ್ಲೀಲ ಕಾರ್ಯ, ದುಷ್ಕೃತ್ಯ, ಅನ್ಯಾಯ, ಅತ್ಯಾಚಾರಗಳನ್ನು ನಿಷೇಧಿಸುತ್ತಾನೆ."

(ಅನ್ನಹ್ಲ್: 90)

ಇಂತಹ ಧರ್ಮದ ಬಗ್ಗೆ ನನ್ನ ಮನಸ್ಸಿನಲ್ಲಿ ಅತೀವ ಗೌರವ ಮೂಡಿತು. ದೇವನು ಎಷ್ಟು ಉನ್ನತವಾದ ಬೋಧನೆಗಳನ್ನು ನೀಡಿದ್ದಾನೆಂದು ನನಗನಿಸಿತು. ಅನಂತರ ನಮಾಝ್‌ನ ಸಮಯ ಬಂದಾಗ ಮುಸ್ಲಿಮರು ಸಾಲುಸಾಲಾಗಿ ಕೈಕಟ್ಟಿ ನಿಂತು ಕೊಂಡರು. ನನಗೆ ಅದನ್ನು ನೋಡಿ ಈ ದೇವಚರರ ಕೂಟದ ಮುಂದೆ ದೇವನು ಸ್ವತಃ ಅನಾವರಣಗೊಂಡಿದ್ದಾನೆ ಎಂದೆನಿಸಿತು. ದೇವನು ಬನೀಇಸ್ರಾಈಲ್ ಸಮುದಾಯದೊಂದಿಗೆ ಎರಡು ಬಾರಿ ಅಭಿಸಂಬೋಧಿಸಿದ್ದರೆ ಈ ಸಮುದಾಯದೊಂದಿಗೆ ದಿನಂಪ್ರತಿ ಐದು ಬಾರಿ ಅಭಿಸಂಬೋಧಿಸುತ್ತಾನೆಂದು ನನಗೆ ಭಾಸವಾಯಿತು.

ನಮಾಝಿನ ವಿಶೇಷತೆಯೇನೆಂದರೆ ಅದಕ್ಕೆ ಯಾವುದೇ ಪುರೋಹಿತ ಅಥವಾ ಪಾದ್ರಿಯ ಅವಶ್ಯಕತೆಯಿಲ್ಲ. ಅದು ನಿರ್ದಿಷ್ಟ ಆರಾಧನಾ ಕೇಂದ್ರದಲ್ಲಿ ನಡೆಯಬೇಕೆಂಬ ಶರ್ತವೂ ಇಲ್ಲ. ಯಾವ ಮುಸ್ಲಿಮನು ಬೇಕಾದರೂ ನಾಯಕತ್ವ ವಹಿಸಬಹುದು. ಯಾವ ಪ್ರದೇಶ ಬೇಕಾದರೂ ಮಸೀದಿಯಾಗಿ ಮಾರ್ಪಡಬಹುದು. ರಾಷ್ಟ್ರ- ಸಮುದಾಯಗಳ ಭೇದವಿಲ್ಲದೆ ಪ್ರತಿಯೊಬ್ಬ ವ್ಯಕ್ತಿ ಅದರಲ್ಲಿ ಭಾಗವಹಿಸಬಹುದು. ನಮಾಝ್‌ನಲ್ಲಿ ಎಷ್ಟು ಪ್ರಭಾವವಿದೆಯೆಂದರೆ ಎಂತಹ ಮಹಾ ಪೂರ್ವಗ್ರಹಪೀಡಿತ ವ್ಯಕ್ತಿಯೂ ಅದರ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸದೆ ಇರಲಾರ. ಅದರಲ್ಲಿ ಕಣ್ಣಿಗೆ ಕಾಣದ ದೇವನನ್ನು ಭಯಭಕ್ತಿಯೊಂದಿಗೆ ಮತ್ತು ಸಮಸ್ತ ಶರೀರದಲ್ಲಿ ಗೌರವಾದರದ ಪ್ರಕಟಣೆ ಮಾಡುವುದರೊಂದಿಗೆ ಉಪಾಸನೆ ಮಾಡಲಾಗುತ್ತದೆ. ಇದು ಎಂತಹ ಕಲ್ಲು ಹೃದಯಿಯನ್ನೂ ಕರಗಿಸದೆ ಇರಲಾರದು.

ಮುಸ್ಲಿಮ್ ವಿದ್ವಾಂಸರೊಂದಿಗೆ ಅನೇಕ ಬಾರಿ ಪ್ರಸಿದ್ಧ ಸಂವಾದಗಳನ್ನು ನಡೆಸಿದ ಫಾದರ್ ಲೆಫ್ರಾಯ್ 'ಮಾನವಕುಲ ಮತ್ತು ಚರ್ಚ್' (Mankind and Church) ಎಂಬ ತಮ್ಮ ಪುಸ್ತಕದಲ್ಲಿ ಹೀಗೆ ಬರೆಯುತ್ತಾರೆ,

"ಮುಸ್ಲಿಮರ ಈ ಆರಾಧನೆಯನ್ನು ಕಂಡು ಅದರಿಂದ ಪ್ರಭಾವಿತರಾಗದವರು ಯಾರೂ ಇರಲಾರರು. ಮುಸ್ಲಿಮರು ಎಲ್ಲೇ ಇದ್ದರೂ ಅದಾನ್‌ನ ಸ್ವರ ಕೇಳುತ್ತಲೇ ಎಲ್ಲಾ ಕೆಲಸಗಳನ್ನು ಬಿಟ್ಟು ಒಬ್ಬ ದೇವನ ಮುಂದೆ ಶಿರಬಾಗುತ್ತಾರೆ. ಆಗ ಅವರು ರಸ್ತೆಯಲ್ಲಿ ನಡೆದಾಡುತ್ತಿರಬಹುದು, ರೈಲ್ವೇ ಸ್ಟೇಶನ್‌ನಲ್ಲಿರಬಹುದು, ಅಂಗಡಿಯಲ್ಲಿ ಕುಳಿತಿರಬಹುದು ಅಥವಾ ಮೈದಾನದಲ್ಲಿ ನಡೆದಾಡುತ್ತಿರಬಹುದು. ವಿಶೇಷವಾಗಿ ದೆಹಲಿಯ ಜಾಮಿಯಾ ಮಸೀದಿಯಲ್ಲಿ ಹದಿನೈದು-ಇಪ್ಪತ್ತು ಸಾವಿರ ಮುಸ್ಲಿಮರು ಅತ್ಯಂತ ಶಾಂತರಾಗಿ ಭಯಭಕ್ತಿಯೊಂದಿಗೆ ಆರಾಧನೆ ಗೈಯುತ್ತಿರುವುದನ್ನು ಕಂಡು ಪ್ರಭಾವಿತರಾಗದೆ ಇರುವವರು ಯಾರೂ ಇರಲಾರರು. ಈ ಧಾರ್ಮಿಕ ವ್ಯವಸ್ಥೆಯ ಹಿಂದೆ ಕೆಲಸ ಮಾಡುತ್ತಿರುವ ಶಕ್ತಿಯ ಬಗ್ಗೆ ಅವನಿಗೆ ಖಂಡಿತ ಜಿಜ್ಞಾಸೆ ಮೂಡುತ್ತದೆ. ಅಲ್ಲದೆ ದಿನದ ಐದು ಹೊತ್ತು ವಿಧ್ಯುಕ್ತವಾಗಿ ಮತ್ತು ಸದ್ದುಗದ್ದಲಗಳ ನಡುವೆಯೂ ಅತ್ಯಂತ ಶಾಂತವಾಗಿ ಮುಸ್ಲಿಮರು ತಮ್ಮ ಕರ್ತವ್ಯ ನಿರ್ವಹಿಸುವುದರ ಹಿಂದೆಯೂ ವಿಶೇಷ ಸಂದೇಶ ಅಡಕವಾಗಿದೆ."

## ಮುಸ್ಲಿಮರ ಜೀವನದಲ್ಲಿ ಇಸ್ಲಾಮೀ ಬೋಧನೆಗಳ ಪ್ರಭಾವ

ಇಸ್ಲಾಮಿನ ಮೂಲಭೂತ ವಿಶ್ವಾಸ ಮತ್ತು ಆರಾಧನಾ ಕರ್ಮಗಳ ನಂತರ ಇಸ್ಲಾಮಿನ ಪ್ರಚಾರದಲ್ಲಿ ಅತ್ಯಂತ ಮಹತ್ವದ ಪಾತ್ರ ವಹಿಸುವ ಸಾಧನ ಮುಸ್ಲಿಮರ ಇಸ್ಲಾಮೀ ಜೀವನವಾಗಿದೆ. ಇಸ್ಲಾಮ್ ಕೇವಲ ತತ್ವಾದರ್ಶಗಳನ್ನು ಮುಂದಿಟ್ಟಿರುತ್ತಿದ್ದರೆ ಹಾಗೂ ಅತ್ಯಂತ ಕರಾಳ ಜನಾಂಗಗಳನ್ನೂ ಮಾನವತ್ವದ ಅತ್ಯುನ್ನತ ಸ್ತರಕ್ಕೆ ಮುಟ್ಟಿಸುವಂತಹ ಕ್ರಾಂತಿಕಾರಿ ಬೋಧನೆಗಳು ಅದರಲ್ಲಿಲ್ಲದಿರುತ್ತಿದ್ದರೆ, ಪ್ರಾಯಶಃ ಜಗತ್ತು ಅದರಿಂದ ಪ್ರಭಾವಿತವಾಗುತ್ತಿರಲಿಲ್ಲ. ಆದರೆ ಇಸ್ಲಾಮ್ ತತ್ವಾದರ್ಶಗಳ ಜತೆಗೆ ಕರ್ಮಗಳನ್ನೂ ಮುಂದಿಟ್ಟಿದೆ, ನಿಜವಾಗಿ ಅದರ ಅಯಸ್ಕಾಂತೀಯ ಶಕ್ತಿಯೇ ಮನಸ್ಸನ್ನು ಸೂರೆಗೊಳ್ಳುವ ಸಾಧನವಾಗಿದೆ.

ದೇವನು ಏಕನು, ಮಹಾಶಕ್ತಿಶಾಲಿ ಮತ್ತು ಅವನೆಡೆಗೆ ಮಾತ್ರ ಸಹಾಯಕ್ಕಾಗಿ ಮೊರೆಹೋಗಲು ಸಾಧ್ಯ ಎಂಬುದು ಅತ್ಯಂತ ಪ್ರಬಲ ಸಿದ್ಧಾಂತವಾಗಿದೆ. ಅದು ಮುಸ್ಲಿಮರನ್ನು ಸ್ವಾಭಿಮಾನಿಗಳನ್ನಾಗಿ, ತಾಳ್ಮೆ ಮತ್ತು ಸಂಯಮದ ಸಾಕಾರ ಮೂರ್ತಿಗಳನ್ನಾಗಿ ಲೋಕದ ಯಾವ ಶಕ್ತಿಗೂ ಅಂಜದ, ಯಾರ ಮುಂದೆಯೂ ಕೈಯೊಡ್ಡದ, ಎಂತಹ ಮಹಾ ಸಂಕಷ್ಟದ ವೇಳೆಯೂ ನಿರಾಶರಾಗದ ದೃಢಚಿತ್ತರನ್ನಾಗಿ ಮಾಡಿದೆ. ಪರಲೋಕದ ಶಿಕ್ಷೆ-ರಕ್ಷೆಯ ಕಲ್ಪನೆ ಅವರನ್ನು ಶೂರರನ್ನಾಗಿ ಮತ್ತು ಧೀರರನ್ನಾಗಿ ಮಾಡಿದೆ. ಈ ಕಲ್ಪನೆಯ ಆಧಾರದಲ್ಲಿ ಅವರು ಈ ಲೋಕವನ್ನು ನಶ್ವರವೆಂದು ಬಗೆಯುತ್ತಾರೆ ಮತ್ತು ತಮ್ಮ ಜೀವನವನ್ನು ದೇವನಿಗಾಗಿ ತ್ಯಾಗ ಮಾಡಲು ಸದಾ ಸಿದ್ಧರಾಗಿರುತ್ತಾರೆ. ಅವರ ಬಿಸಿ ರಕ್ತಕ್ಕೆ ಲೋಕದಲ್ಲೆಲ್ಲೂ ಪರ್ಯಾಯವಿಲ್ಲ. ದೇವಭಕ್ತಿ ಮತ್ತು ವ್ಯಕ್ತಿತ್ವ ವಿಕಾಸಕ್ಕೆ ಸಂಬಂಧಿಸಿದ ಇಸ್ಲಾಮಿನ ಬೋಧನೆಗಳು ಅವರಲ್ಲಿ ಅಸಾಧಾರಣವಾದ ದೇವಭಕ್ತಿ ಮತ್ತು ಪರಿಶುದ್ಧತೆಯನ್ನು ಬೆಳೆಸುತ್ತದೆ. ಮದ್ಯಪಾನ, ಕಳ್ಳತನ ಮತ್ತು ಇತರ ನೈತಿಕ ಅಪರಾಧಗಳಿಂದ ಸರಿದು ನಿಲ್ಲುವಲ್ಲಿ ಅವರು

ಇತರ ಧರ್ಮಾನುಯಾಯಿಗಳಿಗಿಂತ ಮುಂದಿರುತ್ತಾರೆ. ಮಾನವೀಯ ಸಮಾನತೆ ಮತ್ತು ಇಸ್ಲಾಮೀ ಸೋದರತ್ವದ ಕುರಿತು ಇಸ್ಲಾಮಿನ ಬೋಧನೆಗಳು ಅವರಲ್ಲಿ ಪ್ರಜಾಸತ್ತಾತ್ಮ ಸ್ಫೂರ್ತಿಯನ್ನು ತುಂಬುತ್ತದೆ. ಅವರಲ್ಲಿ ವಂಶ-ವರ್ಣದ ತಾರತಮ್ಯವಾಗಲಿ, ಜಾತಿ-ವಿಜಾತಿಗ ಬಂಧನವಾಗಲಿ, ಬಡವ-ಬಲ್ಲಿದ ಎಂಬ ಭೇದವಾಗಲಿ, ಜನಾಂಗ-ರಾಷ್ಟ್ರ ಆಧಾರಿ ಪಕ್ಷಪಾತವಾಗಲಿ ಕಂಡು ಬರುವುದಿಲ್ಲ. ಇಸ್ಲಾಮ್ ಸ್ವೀಕರಿಸಿದ ನಂತರ ಪ್ರತಿಯೊಬ್ಬನು ಇಸ್ಲಾಮೀ ಭ್ರಾತೃತ್ವದ ಓರ್ವ ಸದಸ್ಯನಾಗಿ ಮಾರ್ಪಡುತ್ತಾನೆ. ಕರಿಯನಾಗಿರಲಿ, ಬಿಳಿಯನಾಗಿರಲಿ ಸಿರಿವಂತನಾಗಿರಲಿ, ಬಡವನಾಗಿರಲಿ, ಯಜಮಾನನಾಗಿರಲಿ- ಸೇವಕನಾಗಿರಲಿ ಒಟ್ಟಿನಲ್ಲಿ ಮುಸ್ಲಿಮರೆಲ್ಲರೂ ತಮ್ಮನ್ನು ಪರಸ್ಪರ ಸಹೋದರರೆಂದು ಬಗೆಯುತ್ತಾರೆ. ಓರ್ವ ಸಾಮಾನ್ಯ ಮುಸ್ಲಿಮನು ಕೂಡಾ ನಮಾಝಿನ ವೇಳೆ ಅತ್ಯಂತ ಹಿರಿಯ ಮುಸ್ಲಿಮನ ಜತೆ ನಿಂತು ನಮಾಝ್ ಮಾಡಬಹುದಾಗಿದೆ.

ಅಲ್ಲದೆ ಇಸ್ಲಾಮಿನ ಇತರ ಬೋಧನೆಗಳ ಪ್ರಭಾವವೂ ಮುಸ್ಲಿಮರ ಜೀವನದಲ್ಲಿ ನಿಚ್ಚಳವಾಗಿದೆ. ಉದಾಹರಣೆಗೆ ಅತ್ಯಂತ ಕರಾಳ ಜನಾಂಗಗಳಲ್ಲೂ ಇಸ್ಲಾಮ್ ಸ್ವೀಕರಿಸಿದ ತಕ್ಷಣ ಆವರಿಸಿಕೊಳ್ಳುವ ಜ್ಞಾನ, ಸಂಸ್ಕೃತಿ ಮತ್ತು ನಾಗರಿಕತೆ. ಆಫ್ರಿಕಾದ ಕರಾಳ ಜನಾಂಗಗಳಲ್ಲಿ ಇಸ್ಲಾಮ್ ಸ್ವೀಕರಿಸಿದ ತಕ್ಷಣ ಮೂಡುವ ಸಂಸ್ಕೃತಿಯನ್ನು ಕಂಡು ಯುರೋಪಿನ ಕ್ರೈಸ್ತ ಪ್ರಚಾರಕರು ನಿಬ್ಬೆರಗಾಗುತ್ತಾರೆ. ಮಸೀದಿಯ ನಿರ್ಮಾಣ, ಮದ್ರಸಾಗಳ ಸ್ಥಾಪನೆ, ಸಾಮೂಹಿಕ ಜೀವನ, ವ್ಯಾಪಾರ ಮತ್ತು ಸುಭಿಕ್ಷೆ ಇತ್ಯಾದಿಗಳ ಬೆಳವಣಿಗೆ ಇವೆಲ್ಲವೂ ಆಫ್ರಿಕಾದ ಕರಾಳ ಜೀವನವನ್ನು ನಾಗರಿಕ ಮತ್ತು ಸುಸಂಸ್ಕೃತ ಜೀವನವನ್ನಾಗಿ ಮಾಡುತ್ತದೆ. ತಮ್ಮ ಸಹ ಜನಾಂಗಗಳನ್ನು ಅಷ್ಟು ಬೇಗ ಉನ್ನತ ಸ್ತರಕ್ಕೆ ಮುಟ್ಟಿಸುವುದನ್ನು ಕಂಡು ಇತರ ಜನಾಂಗಗಳಿಗೂ ಇಸ್ಲಾಮ್ ಸ್ವೀಕರಿಸುವ ಆಸಕ್ತಿ ಮೂಡುತ್ತದೆ. ಹಿ.ಶ. ಆರನೇ ಶತಮಾನದಲ್ಲಿ ಉತ್ತರ ನೈಜೀರಿಯಾದ ಅತ್ಯಂತ ಪ್ರಬಲ ಪ್ರಾಂತ್ಯವಾದ 'ಜಿನ್ನಿ' (Genne)ಯಲ್ಲಿ ಬರ್‌ಬರ್ ಜನಾಂಗಗಳು ಇಸ್ಲಾಮಿನ ಪ್ರಚಾರ ಮಾಡಿದಾಗ ಅಲ್ಲಿ ಅನೇಕ ವಿದ್ವಾಂಸರು ಮಾಡಿದ ಘಟನೆ ಇತಿಹಾಸದಲ್ಲಿ ಪ್ರಸಿದ್ಧವಿದೆ. ಅಲ್ಲಿನ ರಾಜ ಇಸ್ಲಾಮ್ ಸ್ವೀಕರಿಸಲಿಕ್ಕಾಗಿ ಸಭೆ ಕರೆದಾಗ ಅದರಲ್ಲಿ ಎರಡು ಸಾವಿರದ ನಾನೂರು ವಿದ್ವಾಂಸರು ಭಾಗವಹಿಸಿದರು. ಜನರನ್ನು ಸುಸಂಸ್ಕೃತರನ್ನಾಗಿ ಮಾಡುವ ಇಸ್ಲಾಮಿನ ಈ ಅಂಶ ಅರಬ್ ದೇಶ, ಭಾರತ, ಈಜಿಪ್ಟ್ ಮತ್ತು ಸ್ಪೇನ್‌ನ ಮೇಲೆ ಬೀರಿರುವ ಪ್ರಭಾವವನ್ನು ಇಲ್ಲಿ ಪ್ರಸ್ತಾಪಿಸಬೇಕಾಗಿಲ್ಲ. ಆ ಕುರಿತು ಅತ್ಯಂತ ನಿಚ್ಚಳವಾದ ಐತಿಹಾಸಿಕ ಸಾಕ್ಷ್ಯಾಧಾರಗಳಿವೆ.

## ಪ್ರಭಾವಪೂರ್ಣವಾದ ಇಸ್ಲಾಮೀ ಸಮಾನತೆ

ಇಸ್ಲಾಮೀ ಜೀವನದ ಅತ್ಯಂತ ಪ್ರಭಾವಪೂರ್ಣವಾದ ಅಂಶ ಸಮಾನತೆಯಾಗಿದೆ. ಆಚಾರ ಸಂಪ್ರದಾಯಗಳಿಂದಾಗಿ ಹಾಗೂ ರಾಜಕೀಯ ಮತ್ತು ಅಧಿಕಾರದ ಸ್ವಾರ್ಥ ಹಿತಾಸಕ್ತಿಗಳಿಂದಾಗಿ ಸಾಮಾನ್ಯ ಮಾನವೀಯ ಹಂತಕ್ಕಿಂತ ಕೆಳಗೆ ತಳ್ಳಲ್ಪಟ್ಟ ಎಲ್ಲಾ ಜನಾಂಗಗಳಿಗೂ ಇಸ್ಲಾಮ್ ಒಂದು ದಿವ್ಯಾನುಗ್ರಹವಾಗಿದೆ. ಇಸ್ಲಾಮ್ ಅವರೆಲ್ಲರ ಪಾಲಿಗೆ

ಮೋಕ್ಷದ ಸಂದೇಶವನ್ನು ತರುತ್ತದೆ. ಸಾವಿರಾರು ಜನಾಂಗಗಳನ್ನು ನಿಂದ್ಯತೆಯ ಪಾತಾಳದಿಂದ ಮೇಲೆತ್ತಿ ಘನತೆ-ಗೌರವದ ಉನ್ನತ ದಿಗಂತಕ್ಕೆ ಮುಟ್ಟಿಸಿರುವುದಕ್ಕೆ ಇತಿಹಾಸ ಸಾಕ್ಷಿಯಿದೆ. ಇಸ್ಲಾಮಿನ ಪ್ರಚಾರದಲ್ಲಿ ಅದು ಪ್ರತಿಪಾದಿಸುವ ಸಮಾನತೆ ಮಹತ್ವದ ಪಾತ್ರವಹಿಸಿದೆ. ಶೋಷಿತ ಜನಾಂಗಗಳ ಮಧ್ಯೆ ಇಸ್ಲಾಮಿನ ಪ್ರಚಾರ ವ್ಯಾಪಕವಾಗಿ ನಡೆಯಲು ಇರುವ ಏಕೈಕ ಕಾರಣ ಇಸ್ಲಾಮಿೊ ಸಮಾನತೆಯಾಗಿದೆ. ಬಂಗಾಳದ ಕೆಳಜಾತಿಗೆ ಸೇರಿದ ಜನಾಂಗಗಳಲ್ಲಿ ಇಸ್ಲಾಮಿನ ಪ್ರಚಾರವಾದ ಕುರಿತು, ಸರ್ ವಿಲಿಯಮ್ ಹಂಟರ್ (Sir William Hunter) ಹೀಗೆ ಬರೆಯುತ್ತಾರೆ-

"ಆ ಬಡ ಮೀನುಗಾರರು, ಬೇಟೆಗಾರರು ಮತ್ತು ರೈತರ ಪಾಲಿಗೆ ಇಸ್ಲಾಮ್ ಆಗಸದಿಂದ ಬಂದೆರಗಿದ ಅನುಗ್ರಹವಾಗಿತ್ತು. ಇಸ್ಲಾಮ್ ಆಳುವ ಜನರ ಧರ್ಮವಾಗಿತ್ತು. ಅಲ್ಲದೆ, ಅವರು ಇಸ್ಲಾಮ್ ಸ್ವೀಕರಿಸುವ ಮೂಲಕ ಅವರನ್ನು ಕೀಳೆಂದು ಭಾವಿಸುತ್ತಿದ್ದ ಜನರಿಗಿಂತ ಉನ್ನತ ಪದವಿಗೆ ತಲಪಬಹುದಾಗಿತ್ತು. ಆದ್ದರಿಂದಲೇ ಅತ್ಯಂತ ಸುಭಿಕ್ಷವಾದ ಈ ರಾಜ್ಯದಲ್ಲಿ ಇಸ್ಲಾಮ್ ಪ್ರಬಲವಾಯಿತು. ಚರಿತ್ರೆಯಲ್ಲಿ ಅಲ್ಲೊಮ್ಮೆ ಇಲ್ಲೊಮ್ಮೆ ಬಲಪ್ರಯೋಗದ ಉದಾಹರಣೆಗಳು ಕಂಡು ಬರುತ್ತದೆ. ಆದರೆ ಇಸ್ಲಾಮಿನ ಪ್ರಚಾರದ ಹಿಂದೆ ಅಡಕವಾಗಿರುವ ನೈಜ ಶಕ್ತಿ ಅದಲ್ಲ, ಬದಲಾಗಿ ಇಸ್ಲಾಮಿನಲ್ಲಡಕವಾಗಿರುವ ಒಳಿತುಗಳೇ ಅದರ ಪಾಲಿಗೆ ಹಿತಕಾರಿಯಾಗಿ ಪರಿಣಮಿಸಿತು. ಅದು ಬಂಗಾಳದ ಜನರ ವಿವೇಕಕ್ಕೆ ಮೊರೆಯಿಟ್ಟಿತು. ಮಾನವಕುಲದ ಉನ್ನತ ಅರ್ಥವನ್ನು ಅವರ ಮುಂದಿಟ್ಟಿತು. ಅವರಿಗೆ ತಿಳಿದೇ ಇಲ್ಲದಂತಹ ಮಾನವೀಯ ಭ್ರಾತೃತ್ವದ ಅನುಪಮವಾದ ತತ್ವಾದರ್ಶಗಳನ್ನು ಸ್ಥಾಪಿಸಿತು. ಜಾತಿಭೇದದ ಬಂಧನಗಳನ್ನು ಪೂರ್ಣವಾಗಿ ಕಳಚಿಬಿಟ್ಟಿತು."

ದಕ್ಷಿಣ ಭಾರತದಲ್ಲಿ ಇಸ್ಲಾಮಿನ ಸಮಾನತೆಯ ಕಲ್ಪನೆಯ ಆಧಾರದಲ್ಲೇ ಅದು ಹಿಂದೂ ಧರ್ಮವನ್ನು ಹಿಂದಿಕ್ಕಿತು. ದಕ್ಷಿಣ ಭಾರತದ ತಿರುನಲ್ವೇಲಿ ಪ್ರದೇಶದಲ್ಲಿ ಸಂಭವಿಸಿದ ಘಟನೆ ಇಸ್ಲಾಮಿನ ವಿಜಯಕ್ಕೆ ಇರುವ ಅತ್ಯುತ್ತಮ ಉದಾಹರಣೆಯಾಗಿದೆ. ಆ ಪ್ರದೇಶದಲ್ಲಿ 'ಶಿನಾರ್' ಎಂಬ ಜನಾಂಗವೊಂದಿತ್ತು. ಅದು ಕೆಳಜಾತಿಗೆ ಸೇರಿದ ಜನಾಂಗವೆಂದು ಪರಿಗಣಿಸಲ್ಪಡುತ್ತಿತ್ತು. ತನ್ನ ನೈಪುಣ್ಯ ಮತ್ತು ಕಷ್ಟದ ದುಡಿಮೆಯಿಂದಾಗಿ ಅದು ಸಾಕಷ್ಟು ಸಂಪತ್ತುಗಳಿಸಿತು. ಶಿಕ್ಷಣ ಮತ್ತು ಸಾಮಾಜಿಕ ಸ್ತರದಲ್ಲಿ ಅದು ಇತರ ಹಿಂದೂಗಳಿಗಿಂತ ಉನ್ನತ ಸ್ಥಾನಕ್ಕೆ ತಲಪಿತು. ಆದರೆ ಹಿಂದೂಗಳು ಅವರೊಂದಿಗೆ ಅಸ್ಪೃಶ್ಯ ಜನಾಂಗಗಳೊಂದಿಗೆ ವರ್ತಿಸುವಂತೆ ಕೀಳಾಗಿಯೇ ವರ್ತಿಸುತ್ತಿದ್ದರು. ಇದರಿಂದ ಆ ಜನಾಂಗದ ಭಾವನೆಗಳಿಗೆ ತೀವ್ರ ಘಾಸಿಯಾಗುತ್ತಿತ್ತು. ಅವರ ಮನಸ್ಸು ಹಿಂದೂ ಧರ್ಮದಿಂದ ವಿಮುಖವಾಗುತ್ತಿತ್ತು, ಕೊನೆಗೆ ಉನ್ನತ ಜಾತಿಯ ಹಿಂದೂಗಳೊಂದಿಗೆ ಅವರ ತೀವ್ರ ಸಂಘರ್ಷ ನಡೆಯಿತು. ಶಿನಾರ್ ಜನಾಂಗಕ್ಕೆ ಸೇರಿದ ಕೆಲವರು ಮಂದಿರ ಪ್ರವೇಶ ಮಾಡಿದ್ದಕ್ಕಾಗಿ ಹಿಂದೂಗಳು ಅವರೊಂದಿಗೆ ತೀವ್ರ ಹಣಾಹಣಿ ನಡೆಸಿದರು. ಕೊನೆಗೆ ಅವರೆಲ್ಲರೂ ಮುಸ್ಲಿಮರಾಗಿ ಮಾರ್ಪಡುವ ತೀರ್ಮಾನ ಮಾಡಿದರು. ಸುಮಾರು ಆರು ನೂರು ಮಂದಿ ಆ ದಿನವೇ ಇಸ್ಲಾಮ್ ಸ್ವೀಕರಿಸಿದರು. ಈ ಸುದ್ದಿ ಸುತ್ತಮುತ್ತಲಿನ ಹಳ್ಳಿಗಳಿಗೆ ತಲಪಿದಾಗ ಆ ಜನಾಂಗಕ್ಕೆ

ಸೇರಿದ ಜನರು ವ್ಯಾಪಕವಾಗಿ ಇಸ್ಲಾಮ್ ಸ್ವೀಕರಿಸುತ್ತಾ ಹೋದರು.

ಆಫ್ರೀಕಾದ ನೀಗ್ರೋ ಜನಾಂಗದಲ್ಲಿ ಇಸ್ಲಾಮಿನ ಮಾನವೀಯ ಸಮಾನತೆ ಮತ್ತು ಭ್ರಾತೃತ್ವ ಅದರ ಪ್ರಚಾರದಲ್ಲಿ ಪ್ರಬಲ ಪಾತ್ರವಹಿಸಿತು. 'ಕ್ರೈಸ್ತ ಮತ, ಇಸ್ಲಾಮ್ ಮತ್ತು ನೀಗ್ರೋ ಜನಾಂಗ' ಎಂಬ ತಮ್ಮ ಪುಸ್ತಕದಲ್ಲಿ ಬ್ರಾಯಿಡನ್ ಹೀಗೆ ಬರೆಯುತ್ತಾರೆ,

"ಮೂರ್ತಿ ಪೂಜಕನಾದ ಒಬ್ಬ ನೀಗ್ರೋ ಇಸ್ಲಾಮ್ ಸ್ವೀಕರಿಸ ಬಯಸುತ್ತಾನೆಂದು ಮುಹಮ್ಮದ್‌ರ(ಸ) ಒಬ್ಬ ಅನುಯಾಯಿಗೆ ತಿಳಿದು ಬಂದಾಗ ಅವನು ಆ ವ್ಯಕ್ತಿಯನ್ನು ತಕ್ಷಣ ತನ್ನ ಭ್ರಾತೃತ್ವದ ಬಂಧನದಲ್ಲಿ ಸಮಾನ ಹಕ್ಕುಗಳಿಗಿರುವ ಸದಸ್ಯನಾಗಿ ಸೇರಿಸಿಕೊಳ್ಳುತ್ತಾನೆ. ಕೇವಲ ಮನಗೆಲ್ಲಲಿಕ್ಕಾಗಿ ಅವನು ಹೀಗೆ ಮಾಡುವುದಲ್ಲ. ಬದಲಾಗಿ ಸೋದರತ್ವದ ನೈಜ ಸ್ಫೂರ್ತಿಯೊಂದಿಗೆ ಅವನ ಉಪಚಾರ ಮಾಡಲಾಗುತ್ತದೆ. 'ಆ ನೀಗ್ರೋ ಇಸ್ಲಾಮಿನಿಂದಾಗಿ ತನ್ನ ಮೇಲಾಗಿರುವ ಅನುಗ್ರಹಗಳನ್ನು ಬಹುಬೇಗ ಅನುಭವಿಸತೊಡಗುತ್ತಾನೆ. ಈ ಕಾರಣದಿಂದಲೇ ಆಫ್ರಿಕಾದಲ್ಲಿ ಇಸ್ಲಾಮಿಗೆ ಕ್ರೈಸ್ತ ಧರ್ಮಕ್ಕಿಂತ ಹೆಚ್ಚು ಮೇಲ್ಮೆ ಇದೆ."

....................

ಅಧ್ಯಾಯ: 3

# ಸೂಫಿ ಸಂತರ ಅನರ್ಘ್ಯ ಸೇವೆ

ಇಸ್ಲಾಮಿನ ಪ್ರಚಾರಕ್ಕೆ ಇರುವ ಎರಡು ಪ್ರಮುಖ ಕಾರಣಗಳನ್ನು ಈ ಹಿಂದೆ ಪ್ರಸ್ತಾವಿಸಲಾಯಿತು. ಇನ್ನು ಈ ದಿವ್ಯ ಸತ್ಯದ ಪಾಲಕರು ಅದರ ಬೆಳಕನ್ನು ಲೋಕದಾದ್ಯಂತ ಹರಡುವಲ್ಲಿ ಯಾವ ಪಾತ್ರ ವಹಿಸಿದ್ದಾರೆಂಬ ಪ್ರಾಯೋಗಿಕ ನೆಲೆಯಲ್ಲಿ ಬೆಳಕು ಚೆಲ್ಲಬೇಕಾಗಿದೆ. ಇಸ್ಲಾಮಿನ ಗುಣವಿಶೇಷತೆಗಳು ಮತ್ತು ಸದಾಚಾರಗಳೇ ನಿಷ್ಕಲ್ಮಶ ಮನಸ್ಸುಗಳನ್ನು ಆ ಸದ್ಧರ್ಮ ಸ್ವೀಕರಿಸಲು ಪ್ರೇರೇಪಿಸುವ ಅದರ ನೈಜ ಶಕ್ತಿಯಾಗಿದೆ ಎಂಬುದರಲ್ಲಿ ಸಂಶಯವಿಲ್ಲ. ಆದರೆ ಎಷ್ಟೇ ಒಳ್ಳೆಯ ಸರಕಾದರೂ ಜಾಹೀರಾತು ಇಲ್ಲದೇ ಹೋದರೆ ಹಾಗೆಯೇ ಉಳಿದು ಬಿಡುವ ಉದಾಹರಣೆಗಳು ಅನುದಿನವೂ ನಮ್ಮ ಮುಂದೆ ಬರುತ್ತದೆ. ಸರಕನ್ನು ಮಾರಾಟ ಮಾಡುವ ಚಾಣಾಕ್ಷ ಮಾರಾಟಗಾರರು ಎಂತಹ ಕಳಪೆ ಸರಕಿಗೆ ಬೇಕಾದರೂ ಮಾರುಕಟ್ಟೆಯಲ್ಲಿ ಬೇಡಿಕೆ ಉಂಟು ಮಾಡುತ್ತಾರೆ. ಯಾವುದೇ ವಸ್ತುವಿನ ಗುಣವಿಶೇಷತೆ ಮತ್ತು ಲಾಭಗಳನ್ನು ಜನರಿಗೆ ತೋರಿಸುವ ಮೂಲಕ ಅವರ ಮನಸ್ಸಿನಲ್ಲಿ ಅದರ ಬಗ್ಗೆ ಆಸಕ್ತಿ ಮೂಡಿಸದೇ ಹೋದರೆ ಜನಸಾಮಾನ್ಯರು ಅದರೆಡೆಗೆ ಆಕರ್ಷಿತರಾಗುವುದಿಲ್ಲ. ಅಪವಾದವೆಂಬತೆ ಕೆಲವರು ಮಾತ್ರ ಅದರೆಡೆಗೆ ಒಲವು ತೋರಬಹುದು. ಆದ್ದರಿಂದಲೇ ಯಾವುದೇ ಸರಕಿನ ಪ್ರಚಾರ ಅದರ ಮಾರಾಟಗಾರರ ಪ್ರಯತ್ನ, ದುಡಿಮೆ ಮತ್ತು ಪ್ರಚಾರ ಶಕ್ತಿಯ ಮೇಲೆ ಅಧಿಷ್ಠಿತವಾಗಿದೆ. ಧರ್ಮದ ಪ್ರಚಾರಕ್ಕೂ ಈ ನಿಯಮ ಸಮಾನವಾಗಿ ಅನ್ವಯವಾಗುತ್ತದೆ. ಇಸ್ಲಾಮ್ ಅತ್ಯುತ್ತಮವಾದ ಸದ್ಧರ್ಮವಾಗಿದೆ ನಿಜ. ಆದರೆ ಅದರ ಪ್ರಚಾರಕ್ಕೆ ಅದರಲ್ಲಿ ಅಂತರ್ಲೀನವಾಗಿರುವ ಸದ್ಗುಣಗಳೇ ಸಾಕಾಗಲಾರದು. ಅದರ ಅನುಯಾಯಿಗಳ ಪ್ರಚಾರಾಸಕ್ತಿಯೂ ಈ ನಿಟ್ಟಿನಲ್ಲಿ ಅತಿ ಮುಖ್ಯವಾಗಿದೆ.

## ಮುಸ್ಲಿಮರ ವಿಶ್ವವ್ಯಾಪಕ ಸಂದೇಶ ಪ್ರಚಾರಾಸಕ್ತಿ

ಹಿಂದಿನ ಕಾಲಘಟ್ಟದಲ್ಲಿ ಸಕ್ರಿಯ ಧರ್ಮನಿಷ್ಠ ಮುಸ್ಲಿಮರಲ್ಲಿದ್ದ ಸಂದೇಶ ಪ್ರಚಾರಾಸಕ್ತಿಯ ಬಗ್ಗೆ ಇಂದಿನ ನಿಷ್ಕ್ರಿಯ ಮುಸ್ಲಿಮರಿಗೆ ಕಲ್ಪಿಸಲಿಕ್ಕೂ ಸಾಧ್ಯವಿಲ್ಲ. ಇಂದಿಗೂ ಈ ಆಸಕ್ತಿ ಆಫ್ರಿಕಾ, ಚೀನಾ, ಮಲಾಯಾ ದ್ವೀಪದ ಮುಸ್ಲಿಮರಲ್ಲಿ ಸ್ವಲ್ಪ ಮಟ್ಟಿಗೆ ಕಂಡು ಬರುತ್ತದೆ. ತಮ್ಮ ಮನಸ್ಸುಗಳನ್ನು ಬೆಳಗಿಸಿರುವ ಈ ಸತ್ಯ ಧರ್ಮವನ್ನು ಅತ್ಯಧಿಕ ಜನರಿಗೆ ತಲಪಿಸುವುದೇ ಅವರ ಜೀವನದ ಅತ್ಯಂತ ಪ್ರಮುಖವಾದ ಕಾರ್ಯವಾಗಿತ್ತು. ಈ ವಿಶ್ವಾಸ ಶಿಲಾರೇಖೆಯಂತೆ ಅವರ ಮನಸ್ಸಿನಲ್ಲಿ ಅಚ್ಚೊತ್ತಲ್ಪಟ್ಟಿತ್ತು. ಸತ್ಯಸಂದೇಶದ ಪ್ರಚಾರ, ಒಳಿತಿನ ಆಜ್ಞೆ ನೀಡುವುದು ಮತ್ತು ಕೆಡುಕಿನಿಂದ ತಡೆಯುವುದು ಮುಸ್ಲಿಮರೆಂಬ ನೆಲೆಯಲ್ಲಿ ತಮ್ಮ ಹುಟ್ಟು ಧ್ಯೇಯವೆಂದು ಅವರು ನೆರೆ ನಂಬಿದ್ದರು. ಅವರು ಎಲ್ಲಿಗೆ ಹೋಗುವುದಿದ್ದರೂ ಈ ಧ್ಯೇಯವನ್ನು ಜತೆಗೊಯ್ಯುತ್ತಿದ್ದರು. ತಮ್ಮ ಜೀವನದ ಪ್ರತಿಯೊಂದು ಕೆಲಸದ ವೇಳೆ

ಅವರು ಅದನ್ನೂ ಕಡ್ಡಾಯವಾಗಿ ಸೇರಿಸಿಕೊಳ್ಳುತ್ತಿದ್ದರು. ಕುರೈಷರ ಹಿಂಸೆಯಿಂದಾಗಿ ಅವರು ಅಬಿಸೀನಿಯಾಕ್ಕೆ ವಲಸೆ ಹೋದಾಗಲೂ ಈ ಕೆಲಸ ಮಾಡಿದರು. ಮಕ್ಕಾದಿಂದ ಹೊರಟು ಮದೀನಾದಲ್ಲಿ ನೆಮ್ಮದಿಯ ಜೀವನ ದೊರೆತಾಗಲೂ ಅವರು ದೇವಧರ್ಮದ ಪ್ರಚಾರದಲ್ಲಿ ತಮ್ಮ ಅತ್ಯಧಿಕ ಶಕ್ತಿಯನ್ನು ವಿನಿಯೋಗಿಸಿದರು. ಇರಾನಿನ ರಾಜವಂಶ ಮತ್ತು ರೋಮನ್ ಸಂಸ್ಕೃತಿಯ ಪಾಳುಬಿದ್ದ ಅರಮನೆಗಳನ್ನು ಬೀಳಿಸುವ ಕೆಲಸ ವಹಿಸಿ ಕೊಟ್ಟಾಗಲೂ ಅವರು ಸಿರಿಯಾ, ಇರಾಕ್, ಇರಾನ್ ಮತ್ತು ರೋಮ್ ಪ್ರದೇಶಗಳಲ್ಲಿ ಈ ಪಾವನ ಕೈಂಕರ್ಯವನ್ನು ನಿರ್ವಹಿಸಿದರು. ಭೂಮಿಯಲ್ಲಿ ಅವರಿಗೆ ಖಿಲಾಫತ್ ಆಡಳಿತ ದಯಪಾಲಿಸಿದಾಗಲೂ ಅವರು ಐಶಾರಾಮಕ್ಕೆ ಮೊರೆಹೋಗಲಿಲ್ಲ, ಬದಲಾಗಿ ದೇವಧರ್ಮದ ನಿರಂತರ ಪ್ರಚಾರ ಕೈಗೊಂಡರು. ಅವರಿಗೆ ತಡೆಯಾಗಿ ನಿಂತದ್ದು ಅಟ್ಲಾಂಟಿಕ್ ಸಾಗರದ ಭೋರ್ಗರೆಯುವ ಅಲೆಗಳು ಮತ್ತು ಇನ್ನೊಂದೆಡೆ ಚೀನಾದ ಅಭೇದ್ಯ ಗೋಡೆ ಮಾತ್ರ. ಅವರು ತಮ್ಮ ವ್ಯಾಪಾರಿ ಸರಕಿನೊಂದಿಗೆ ಸಾಗಿದಾಗಲೂ ಅವರ ಮನಸ್ಸಿನಲ್ಲಿ ಇದೇ ಭಾವನೆ ಆವರಿಸಿಕೊಂಡಿತು. ಆಫ್ರಿಕಾದ ಮರಳುಗಾಡುಗಳಲ್ಲಿ, ಭಾರತದ ಹಸಿರು ಕವಿದ ಕಣಿವೆಗಳಲ್ಲಿ, ಶಾಂತ ಸಾಗರದ ವಿದೂರ ದ್ವೀಪಗಳಲ್ಲಿ, ಯುರೋಪಿನ ಶ್ವೇತವರ್ಣದ ಸತ್ಯನಿಷೇಧದ ನೆಲೆವೀಡುಗಳಲ್ಲಿ ಅವರು ಮುಸ್ಲಿಮ್ ಸಮುದಾಯದ ಬೆಳಕನ್ನು ಹರಡಿದರು.

ಈ ಸಂದೇಶ ಪ್ರಚಾರಾಸಕ್ತಿ ಅವರಲ್ಲಿ ಎಷ್ಟರ ಮಟ್ಟಿಗಿತ್ತೆಂದರೆ ಕಾರಾಗೃಹದ ಅತ್ಯಂತ ಕಠಿಣ ಶಿಕ್ಷೆಯನ್ನು ಅನುಭವಿಸುತ್ತಿದ್ದಾಗಲೂ ಈ ಪ್ರಜ್ಞೆ ಅವರಿಂದ ಮರೆಯಾಗಲಿಲ್ಲ. ಕಾರಾಗೃಹದ ಕರಾಳ ಕೋಣೆಗಳಲ್ಲಿ ತಮ್ಮ ಸಹವರ್ತಿಗಳಲ್ಲಿ ಅವರು ಇಸ್ಲಾಮಿನ ಪ್ರಚಾರ ಗೈಯುತ್ತಿದ್ದರು. ಎಲ್ಲಿಯವರೆಗೆಂದರೆ ನೇಣು ಗಂಬದಲ್ಲಿ ಅಲ್ಲಾಹನ ಸಂದೇಶವನ್ನು ಅವನ ದಾಸರಿಗೆ ಮುಟ್ಟಿಸುವ ಕೆಲಸದಲ್ಲಿ ಅಂತಿಮ ಕ್ಷಣಗಳನ್ನು ಕಳೆಯುವ ಚಿಂತೆ ಅವರನ್ನು ಕಾಡುತ್ತಿತ್ತು.

ಬೆಲ್ಜಿಯಮ್‌ನಲ್ಲಿ ನಡೆದ ಘಟನೆಯೊಂದು ಪ್ರಸಿದ್ಧವಿದೆ. ಬೆಲ್ಜಿಯಮ್ ಸರಕಾರ ಅಲ್ಲಿನ ಮುಸ್ಲಿಮ್ ನಾಯಕರೊಬ್ಬರನ್ನು ಸೆರೆ ಹಿಡಿದು ಅವರಿಗೆ ಮರಣದಂಡನೆ ವಿಧಿಸಿತು. ಅವರಿಗೆ ಜೀವನದ ಅಂತಿಮ ಕ್ಷಣದಲ್ಲಿ ಕ್ರೈಸ್ತ ಮತದ ಬೋಧನೆ ನೀಡಲು ಹೋದ ಪಾದ್ರಿಯನ್ನೇ ಅವರು ಇಸ್ಲಾಮ್ ಸ್ವೀಕರಿಸುವಂತೆ ಮಾಡಿದರು.

ಚರಿತ್ರೆಯಲ್ಲಿ ದಾಖಲಾಗಿರುವತೆ ಮುಜದ್ದಿದ್ ಸೈಯದ್ ಅಹ್ಮದ್ ಸರ್‌ಹಿಂದಿಯವರು ಜಹಾಂಗೀರನ ಕಾಲದಲ್ಲಿ ಎರಡು ವರ್ಷಗಳ ಕಾಲ ಸೆರೆಮನೆಯಲ್ಲಿ ಕಳೆದಿದ್ದರು. ಆಗ ತಮ್ಮ ಸಮಯವನ್ನು ಅವರು ನಿರಂತರ ಧರ್ಮಪ್ರಚಾರದಲ್ಲಿ ವಿನಿಯೋಗಿಸುತ್ತಿದ್ದರು. ಅವರು ಬಂಧಮುಕ್ತರಾಗುವಾಗ ನೂರಾರು ಹಿಂದೂ ಕೈದಿಗಳು ಅವರ ಪ್ರಭಾವದಿಂದ ಇಸ್ಲಾಮ್ ಸ್ವೀಕರಿಸಿದ್ದರು. ಗಡಿನಾಡಿನ ಹೋರಾಟಗಾರರೊಂದಿಗೆ ಸಂಚು ನಡೆಸಿದ ಆರೋಪದಲ್ಲಿ ಮೌಲಾನಾ ಮುಹಮ್ಮದ್ ಜಲಿಫರ್ ಥ್ಯಾನೇಸ್ರಿಯವರನ್ನು ಅಂಡಮಾನ್ ದ್ವೀಪಕ್ಕೆ ಗಡಿ ಪಾರು ಮಾಡಲಾಗಿತ್ತು. ಅಲ್ಲಿ ಅವರು ಅಂಡಮಾನಿನ ಅನೇಕ ಕೈದಿಗಳಲ್ಲಿ ಇಸ್ಲಾಮಿನ ಪ್ರಚಾರಗೈದರು. ಪೂರ್ವ ಯುರೋಪಿನಲ್ಲಿ ಕ್ರೈಸ್ತರ ವಿರುದ್ಧ ಹೋರಾಟ ನಡೆಸಿದ

ಆರೋಪದಲ್ಲಿ ಬಂಧಿಸಲ್ಪಟ್ಟ ಮುಸ್ಲಿಮ್ ವಿದ್ವಾಂಸರ ಮೂಲಕ ಇಸ್ಲಾಮಿನ ಪ್ರಚಾರವಾಯಿತು. ಬಂಧಿಸ್ಪಟ್ಟ ನಂತರ ಅವರನ್ನು ಸಂಕೋಲೆಗಳಲ್ಲಿ ಬಂಧಿಸಿ ಡಾನ್ ಮತ್ತು ಡ್ಯೋನಬ್‌ನ ಮಧ್ಯಮ ಭಾಗಕ್ಕೆ ಕಳುಹಿಸಲಾಗಿತ್ತು. ಅಲ್ಲಿ ಅವರ ಪ್ರಾಮಾಣಿಕತೆ ಎಷ್ಟು ಪ್ರಭಾವ ಬೀರಿತೆಂದರೆ ಸ್ವಲ್ಪ ಸಮಯದಲ್ಲಿ ಸುಮಾರು ಹನ್ನೆರಡು ಸಾವಿರ ಮಂದಿ ಇಸ್ಲಾಮ್ ಸ್ವೀಕರಿಸಿದರು. ಹಿಜರಿಶಕೆ ಆರನೇ ಶತಮಾನದ ಮಧ್ಯಭಾಗದಲ್ಲಿ ಅಲ್ಲಿನ ಸಂಪೂರ್ಣ ಪ್ರದೇಶ ಇಸ್ಲಾಮಿನ ಅಧೀನವಾಯಿತು.

## ಮುಸ್ಲಿಮ್ ಮಹಿಳೆಯರ ಸಂದೇಶಪ್ರಚಾರಾಸಕ್ತಿ

ಈ ಜಾಗತಿಕ ಸಂದೇಶ ಪ್ರಚಾರಾಸಕ್ತಿಯಿಂದ ಮುಸ್ಲಿಮ್ ಮಹಿಳೆಯರೂ ಮುಕ್ತರಲ್ಲ. ತಾರ್ತಾರಿ ಮೊಗಲರು ಇಸ್ಲಾಮೀ ಸಾಮ್ರಾಜ್ಯದಿಂದ ಅನೇಕ ಮಹಿಳೆಯರನ್ನು ದಾಸಿಯರನ್ನಾಗಿ ಮಾಡಿ ಕೊಂಡೊಯ್ದಿದ್ದರು. ಮುಂದೆ ಈ ಕೋಮಲಾಂಗನೆಯರಾದ ಮಹಿಳೆಯರೇ ಅವರ ಕೈಗಳಿಂದ ಮುಸ್ಲಿಮರ ವಿರುದ್ಧ ಮಸೆಯಲ್ಪಡುವ ಖಡ್ಗಗಳನ್ನು ಕಿತ್ತು ಇಸ್ಲಾಮಿನ ಅನುಸರಣೆಯ ಕೈಕೋಳ ತೊಡಿಸಿದ್ದರು. ಗಾರ್ಝಾನ್‌ಶಾನ ಸಹೋದರ ಓಲ್ಜಾತ್ತಿಯೋಖಾನ್‌ನನ್ನು ಅವನ ಪತ್ನಿಯೇ ಇಸ್ಲಾಮ್ ಸ್ವೀಕರಿಸುವಂತೆ ಮಾಡಿದ್ದಳು. ಅದರಿಂದ ವಲ್‌ಖಾನ್ ಸರಕಾರ ಇಸ್ಲಾಮೀ ಸಾಮ್ರಾಜ್ಯವಾಗಿ ಮಾರ್ಪಟ್ಟಿತು. ಚುಗ್ತಾಯಿ ಕುಟುಂಬವು ಮುಸ್ಲಿಮರ ಕಡು ವೈರಿಯಾಗಿತ್ತು. ಆದರೆ ಹಲಾಕೂಬಾನ್‌ನ ಮುಸ್ಲಿಮ್ ಪತ್ನಿ 'ಕರಹ್' ಮೊದಲು ಅವನಿಗೆ ಇಸ್ಲಾಮಿನ ಪರಿಚಯ ಮಾಡಿಸಿದಳು. ಪರಿಣಾಮವಾಗಿ ಮುಬಾರಕ್ ಶಾ ಮತ್ತು ಬರ್ರಾಕ್ ಖಾನ್ ಮುಸ್ಲಿಮರಾಗಿ ಮಾರ್ಪಟ್ಟರು. ಸಾವಿರಾರು ತಾರ್ತಾರಿ ಸೈನಿಕರು ತಮ್ಮ ಜತೆ ಮುಸ್ಲಿಮ್ ಮಹಿಳೆಯರನ್ನು ಕೊಂಡೊಯ್ದಿದ್ದರು. ಅವರು ತಮ್ಮ ಧರ್ಮವನ್ನು ತೊರೆದು ಪತಿಯಂದಿರ ಮತವನ್ನು ಸ್ವೀಕರಿಸುವ ಬದಲು ತಮ್ಮ ಮುಸ್ಲಿಮೇತರ ಪತಿಯರನ್ನು ಮತ್ತು ವಿಶೇಷವಾಗಿ ಅವರ ಮಕ್ಕಳನ್ನು ಮುಸ್ಲಿಮರನ್ನಾಗಿ ಮಾಡಿದರು. ಆದ್ದರಿಂದಲೇ ತಾರ್ತಾರಿಗಳ ನಾಡಿನಲ್ಲಿ ಇಸ್ಲಾಮಿನ ಪ್ರಚಾರವಾಯಿತು. ಅದೇ ರೀತಿಯಲ್ಲಿ ಇಥಿಯೋಪಿಯಾದಲ್ಲಿ ಇಸ್ಲಾಮಿನ ಪ್ರಚಾರ ಮಾಡುವಲ್ಲಿ ಮುಸ್ಲಿಮ್ ಮಹಿಳೆಯರು ಮಹತ್ತರ ಪಾತ್ರ ವಹಿಸಿದರು. ಇಥಿಯೋಪಿಯಾದ ಅನೇಕ ಸರದಾರರು ಅವರ ಪತ್ನಿಯರ ಮೂಲಕ ಇಸ್ಲಾಮ್ ಸ್ವೀಕರಿಸಿದ ಅನೇಕ ನಿದರ್ಶನಗಳು ಚರಿತ್ರೆಯಲ್ಲಿ ಕಂಡು ಬರುತ್ತದೆ. ಸನ್ಸೂಸಿ ಪ್ರಚಾರಕರು ಮಧ್ಯ ಆಫ್ರಿಕಾದಲ್ಲಿ ಇಸ್ಲಾಮಿನ ಪ್ರಚಾರ ಗೈಯಲು ನಿರಂತರ ಮಹಿಳಾ ಸಂಘಟನೆಗಳಿಂದ ಪ್ರಯೋಜನ ಪಡೆದಿದ್ದರು. ಆದ್ದರಿಂದಲೇ ಅಲ್ಲಿ ಬಾಲಕಿಯರಿಗೆ ಇಸ್ಲಾಮೀ ಶಿಕ್ಷಣ ನೀಡುವ ಅನೇಕ ಬಾಲಕಿಯರ ಶಿಕ್ಷಣ ಸಂಸ್ಥೆಗಳನ್ನು ಕಾಣಬಹುದಾಗಿದೆ.

## ಭಾರತದಲ್ಲಿ ಸೂಫಿಸಂತರು ಸಲ್ಲಿಸಿದ ಸೇವೆ

ಉಪಖಂಡದ ಮುಸ್ಲಿಮರು ಸಂದೇಶ ಪ್ರಚಾರಾಸಕ್ತಿಯಿಂದ ತೀರಾ ಅಶ್ರದ್ಧರಾಗಿರುವ ಪರಿಸ್ಥಿತಿಯಲ್ಲಿ ಸೂಫಿಸಂತರು ದೇವಧರ್ಮದ ಪ್ರಚಾರದಲ್ಲಿ ಅತ್ಯಂತ ಸಕ್ರಿಯ ಪಾತ್ರವಹಿಸಿದ್ದಾರೆ.

ಭಾರತದಲ್ಲಿ ಆಗಿ ಹೋದ ಸೂಫಿಸಂತರು ದೃಢಚಿತ್ತತೆ ಮತ್ತು ಅಪಾರ ಸ್ಫೂರ್ತಿಯೊಂದಿಗೆ ಇಸ್ಲಾಮಿನ ಬೆಳಕನ್ನು ಹರಡಿರುವುದು ಇಂದು 'ತಸವ್ವುಫ್' ಅಥವಾ ಸೂಫಿಪಂಥದಲ್ಲಿ ಆಸಕ್ತಿವಹಿಸುವ ಮುಸ್ಲಿಮರ ಪಾಲಿಗೆ ಪಾಠಬೋಧಕವಾಗಿದೆ. ಖ್ವಾಜಾ ಮುಈನುದ್ದೀನ್ ಚಿಶ್ತಿ ಅಜ್ಮೀರಿ ಭಾರತದ ಮಹಾ ಧರ್ಮಪ್ರಚಾರಕರಾಗಿದ್ದರು. ಅವರ ಮೂಲಕ ರಜಪೂತ ಸಮುದಾಯದಲ್ಲಿ ಇಸ್ಲಾಮಿನ ಪ್ರಚಾರವಾಯಿತು. ಅವರ ನೇರ ಮತ್ತು ಪರೋಕ್ಷವಾದ ಅನೇಕ ಶಿಷ್ಯಂದಿರು ಇಸ್ಲಾಮಿನ ಜ್ಯೋತಿ ಹಿಡಿದು ಭಾರತದಾದ್ಯಂತ ಚದರಿದರು. ಹಝ್ರತ್ ಖ್ವಾಜಾ ಬಖ್ತಿಯಾರ್ ಕಾಕಿ ದೆಹಲಿಯ ಸುತ್ತಮುತ್ತ, ಹಝ್ರತ್ ಫರೀದುದ್ದೀನ್ ಗಂಜ್‌ಶಕರ್ ಪಂಜಾಬಿನಲ್ಲಿ, ಹಝ್ರತ್ ನಿಝಾಮುದ್ದೀನ್ ಮಹ್ಬೂಬ್ ಇಲಾಹಿ ದೆಹಲಿ ಮತ್ತು ಸಮೀಪದ ಹಳ್ಳಿ ಪ್ರದೇಶಗಳಲ್ಲಿ, ಹಝ್ರತ್ ಸೈಯದ್ ಮುಹಮ್ಮದ್ ಗೇಸೂದರಾಝ್, ಹಝ್ರತ್ ಶೇಖ್ ಬುರ್ಹಾನುದ್ದೀನ್ ಮತ್ತು ಔರಂಗಾಬಾದಿನ ಹಝ್ರತ್ ನಿಝಾಮುದ್ದೀನ್ ದಕ್ಷಿಣ ಭಾರತದಲ್ಲಿ ಹಾಗೂ ಹಝ್ರತ್ ಶಾ ಕಲೀಮುಲ್ಲಾ ಜಹಾಂ ಆಬಾದಿ ದೆಹಲಿಯಲ್ಲಿ ಇಸ್ಲಾಮಿನ ಸಂದೇಶ ಪ್ರಚಾರದ ಕಾರ್ಯನಡೆಸಿದರು. ಅಲ್ಲದೆ ಔಲಿಯಾಗಳೆನಿಸಿಕೊಂಡ ಇತರ ಅನೇಕರು ಈ ಕೆಲಸವನ್ನು ನಿರಂತರ ನಿರ್ವಹಿಸಿದರು. ಸೈಯದ್ ಇಸ್ಮಾಈಲ್ ಬುಖಾರಿ ಪಂಜಾಬಿನ ಮೊದಲ ಸಂದೇಶ ಪ್ರಚಾರಕರಾಗಿದ್ದರು. ಅವರು ಹಿಜರಿ ಶಕೆ ಐದನೇ ಶತಮಾನದಲ್ಲಿ ಲಾಹೋರಿಗೆ ಬಂದಿದ್ದರು. ಅವರ ಉಪದೇಶಗಳನ್ನು ಕೇಳಲು ಸಾವಿರಾರು ಜನರು ಬರುತ್ತಿದ್ದರು ಮತ್ತು ಯಾರಾದರೂ ಒಮ್ಮೆ ಅವರ ಉಪದೇಶ ಕೇಳಿದರೆ ಇಸ್ಲಾಮ್ ಸ್ವೀಕರಿಸದೆ ಮರಳುತ್ತಿರಲಿಲ್ಲ ಎಂಬುದು ಇತಿಹಾಸ ಪ್ರಸಿದ್ಧವಿದೆ. ಪಶ್ಚಿಮ ಪಂಜಾಬಿನಲ್ಲಿ ಇಸ್ಲಾಮಿನ ಪ್ರಚಾರಗೈದ ಕೀರ್ತಿ ಹಝ್ರತ್ ಬಹಾವುದ್ದೀನ್ ಝಕರಿಯಾ ಮುಲ್ತಾನಿಯವರಿಗೆ ಸಲ್ಲುತ್ತದೆ. ಭಾವಲ್ಪುರ ಮತ್ತು ಪೂರ್ವ ಸಿಂಧ್‌ನಲ್ಲಿ ಜಲಾಲುದ್ದೀನ್ ಬುಖಾರಿಯವರ ಬೋಧನೆಗಳ ಮೂಲಕ ಇಸ್ಲಾಮಿನ ಪ್ರಚಾರವಾಯಿತು. ಅವರ ಸಂತತಿಯ ಪೈಕಿ ಹಝ್ರತ್ ಮಖ್ದೂಮ್ ಜಹಾನಿಯಾನ್ ಪಂಜಾಬಿನ ಹತ್ತಾರು ವಂಶಗಳನ್ನು ಇಸ್ಲಾಮ್ ಸ್ವೀಕರಿಸುವಂತೆ ಮಾಡಿದರು. ಮತ್ತೋರ್ವ ಮಹಾಪುರುಷ ಸೈಯದ್ ಜಲಾಲುದ್ದೀನ್ ಮತ್ತವರ ಪುತ್ರ ಹಝ್ರತ್ ಹಸನ್ ಕಬೀರುದ್ದೀನ್ ಪಂಜಾಬಿನ ಮಹಾ ಇಸ್ಲಾಮೀ ಪ್ರಚಾರಕರಾಗಿದ್ದರು. ಇತಿಹಾಸದಲ್ಲಿ ದಾಖಲಾಗಿರುವಂತೆ ಹಝ್ರತ್ ಕಬೀರುದ್ದೀನ್ ಅತ್ಯಾಕರ್ಷಕವಾದ ವ್ಯಕ್ತಿತ್ವವನ್ನು ಹೊಂದಿದ್ದರು. ಅವರನ್ನು ನೋಡುತ್ತಲೇ ಜನರು ಇಸ್ಲಾಮಿನ ಮಹಾನತೆ ಮತ್ತು ಸತ್ಯತೆಯನ್ನು ಮನಗಾಣುತ್ತಿದ್ದರು, ಅವರ ಸುತ್ತ ಜಮಾಯಿಸಲಾರಂಭಿಸುತ್ತಿದ್ದರು.

ಸಿಂಧ್‌ನಲ್ಲಿ ಸುಮಾರು ಆರು ನೂರು ವರ್ಷಗಳ ಹಿಂದೆ ಇಸ್ಲಾಮಿನ ಪ್ರಚಾರವಾಯಿತು. ಆಗ ಅಲ್ಲಿನ ಸರಕಾರ ಪತನವಾಗಿತ್ತು. ಆ ಸಂದರ್ಭದಲ್ಲಿ ಹಝ್ರತ್ ಸೈಯದ್ ಯೂಸುಫುದ್ದೀನ್ ಅಲ್ಲಿಗಾಗಮಿಸಿದರು. ಅವರ ಪ್ರಭಾವದಿಂದ ಲೋಹಾನ ಸಮುದಾಯದ ಸುಮಾರು ಆರು ನೂರು ಕುಟುಂಬ ಇಸ್ಲಾಮ್ ಸ್ವೀಕರಿಸಿತು. ಕಛ್ ಮತ್ತು ಗುಜರಾತ್‌ನಲ್ಲಿ ಹಝ್ರತ್ ಇಮಾಮ್ ಶಾ ಪೈರಾನ್ವಿ ಮತ್ತು ಮಲಿಕ್ ಅಬ್ದುಲ್ಲತೀಫ್‌ರ ಪ್ರಯತ್ನಗಳ ಮೂಲಕ ಇಸ್ಲಾಮಿನ ಪ್ರಚಾರವಾಯಿತು. ಬಂಗಾಳದಲ್ಲಿ ಮೊಟ್ಟಮೊದಲು ಶೇಖ್ ಜಲಾಲುದ್ದೀನ್

ತಬ್ರೇಝಿ ಈ ಮಹತ್ತರ ಕರ್ತವ್ಯವನ್ನು ನಿರ್ವಹಿಸಿದರು. ಅವರು ಶೇಖ್ ಶಹಾಬುದ್ದೀನ್ ಸುಹರ್ ವರ್ದಿಯವರ ಶಿಷ್ಯಂದಿರಲ್ಲಿ ಒಬ್ಬರಾಗಿದ್ದರು. ಅಸ್ಸಾಮಿನಲ್ಲಿ ಶೇಖ್ ಜಲಾಲುದ್ದೀನ್ ಫಾರ್ಸಿ ಇಸ್ಲಾಮಿನ ಅನುಗ್ರಹವನ್ನು ಬಿತ್ತಿದರು. ಇಂದಿಗೂ ಅವರು ಸಿಲ್‌ಹಟ್‌ನಲ್ಲಿ ಸಮಾಧಿಗ್ರಸ್ತರಾಗಿದ್ದಾರೆ. ಕಾಶ್ಮೀರದಲ್ಲಿ ಬುಲ್‌ಬುಲ್ ಶಾ ಎಂಬ ಸಂತರೊಬ್ಬರು ಮೊಟ್ಟ ಮೊದಲು ಇಸ್ಲಾಮಿನ ಧ್ವಜವನ್ನು ಎತ್ತಿ ಹಿಡಿದರು. ಅವರ ಸಂಗದಿಂದ ಅಲ್ಲಿನ ರಾಜನೇ ಇಸ್ಲಾಮ್ ಸ್ವೀಕರಿಸಿದನು. ಇತಿಹಾಸದಲ್ಲಿ ಅವರು ಸದ್ರುದ್ದೀನ್ ಎಂಬ ಹೆಸರಿನಿಂದ ಪ್ರಸಿದ್ಧರಾಗಿದ್ದಾರೆ. ಅನಂತರ ಹಿಜರಿಶಕೆ ಏಳನೇ ಶತಮಾನದಲ್ಲಿ ಸೈಯದ್ ಅಲಿ ಹಮ್ದಾನಿ ಏಳು ನೂರು ಮಹಾಪುರುಷರೊಂದಿಗೆ ಅಲ್ಲಿಗಾಗಮಿಸಿದರು ಮತ್ತು ಕಾಶ್ಮೀರದಾದ್ಯಂತ ಇಸ್ಲಾಮಿನ ಬೆಳಕನ್ನು ಹರಡಿದರು. ಔರಂಗಝೇಬರ ಕಾಲದಲ್ಲಿ ಸೈಯದ್ ಶಾ ಫರೀದುದ್ದೀನ್ 'ಕಿಶ್ತವಾರದ' ರಾಜನನ್ನು ಇಸ್ಲಾಮ್ ಸ್ವೀಕರಿಸುವಂತೆ ಮಾಡಿದರು. ಅದರ ಮೂಲಕ ಆ ಪ್ರದೇಶದಲ್ಲಿ ಇಸ್ಲಾಮಿನ ಪ್ರಚಾರವಾಯಿತು. ದಕ್ಷಿಣ ಭಾರತದಲ್ಲಿ ಮಹಾವೀರ್ ಕುಮುದಾಯತ್ ಎಂಬ ಸಂತರ ಮೂಲಕ ಇಸ್ಲಾಮಿನ ಪ್ರಚಾರವಾಯಿತು. ಅವರು ಸುಮಾರು ಏಳುನೂರು ವರ್ಷಗಳ ಹಿಂದೆ ಬಿಜಾಪುರಕ್ಕೆ ಆಗಮಿಸಿದ್ದರು. ಹಝ್ರತ್ ಶೇಖ್ ಅಬ್ದುಲ್ ಕಾದರ್ ಜೀಲಾನಿಯವರ ಶಿಷ್ಯರು ಕೊಂಕಣ ಪ್ರದೇಶದಲ್ಲಿ ಸಂದೇಶ ಪ್ರಚಾರದ ಕಾರ್ಯವನ್ನು ನಿರ್ವಹಿಸಿದರು. ಧಾರವಾಡದ ಜನರು ತಮ್ಮ ಇಸ್ಲಾಮ್ ಸ್ವೀಕಾರವನ್ನು ಹಝ್ರತ್ ಶೇಖ್ ಹಾಷಿಮ್ ಗುಜರಾತಿಯವರ ಕೊಡುಗೆಯೆಂದು ಭಾವಿಸುತ್ತಾರೆ. ಅವರು ಚಕ್ರವರ್ತಿ ಇಬ್ರಾಹೀಮ್ ಆದಿಲ್‌ಶಾನ ಗುರುವರ್ಯರಾಗಿದ್ದರು. ನಾಸಿಕ್‌ನಲ್ಲಿ ಹಝ್ರತ್ ಮುಹಮ್ಮದ್ ಸಾದಿಕ್ ಸರ್‌ಮಸ್ತ್ ಮತ್ತು ಖ್ವಾಜಾ ಅಖ್‌ವಂದ್ ಮೀರ್‌ಹುಸೈನಿರವರ ಆಧ್ಯಾತ್ಮಿಕ ಕೊಡುಗೆಗಳನ್ನು ಇಂದಿಗೂ ನೆನಪಿಸಲಾಗುತ್ತದೆ. ಮದ್ರಾಸಿನಲ್ಲೂ ಸನ್ಮಾರ್ಗವನ್ನು ಪಸರಿಸುವಲ್ಲಿ ಕೆಲವು ಮಹಾಪುರುಷರು ತಮ್ಮ ಸೇವೆ ಸಲ್ಲಿಸಿದ್ದಾರೆ. ಅದರಲ್ಲಿ ತಿರುಚಿನಾಪಲ್ಲಿಯಲ್ಲಿ ಸಮಾಧಿಗ್ರಸ್ತರಾಗಿರುವ ಸೈಯದ್ ನಿಸಾರ್‌ಶಾ ಅತ್ಯಂತ ಖ್ಯಾತರಾಗಿದ್ದಾರೆ. ಸೈಯದ್ ಇಬ್ರಾಹೀಮ್ ಶಹೀದ್ ಮತ್ತೋರ್ವ ಮಹಾಪುರುಷರಾಗಿದ್ದು ಅವರ ಗೋರಿ 'ಆರಾದಾರಿ'ಯಲ್ಲಿದೆ. ನಾಗೂರಿನಲ್ಲಿ ಸಮಾಧಿಗೊಂಡಿರುವ ಶಾಹುಲ್ ಹಮೀದ್ ಮತ್ತೋರ್ವ ಮಹಾಪುರುಷರಾಗಿದ್ದಾರೆ. ನ್ಯೂಗರಿಡಾದ ಮುಸ್ಲಿಮ್ ಸಮುದಾಯ ತಮ್ಮ ಇಸ್ಲಾಮ್ ಸ್ವೀಕಾರ ಹಝ್ರತ್ ಬಾಬಾ ಫಖ್ರುದ್ದೀನ್‌ರ ಕೊಡುಗೆಯೆಂದು ನಂಬುತ್ತದೆ. ಅವರು ಅಲ್ಲಿನ ರಾಜನನ್ನೇ ಇಸ್ಲಾಮ್ ಸ್ವೀಕರಿಸುವಂತೆ ಮಾಡಿದ್ದರು.

ಸೂಫಿವರ್ಯರ ಈ ಮಹತ್ತರ ಸೇವೆಯಿಂದಾಗಿ ಹಿಂದೂಗಳ ಒಂದು ದೊಡ್ಡ ವಿಭಾಗ ಈಗಲೂ ಮುಸ್ಲಿಮ್ ಮಹಾಪುರುಷರ ಅಭಿಮಾನಿಗಳಾಗಿರುವುದು ಕಂಡು ಬರುತ್ತದೆ. ಅವರು ಇಸ್ಲಾಮ್ ಸ್ವೀಕರಿಸಲಿಲ್ಲವೆಂಬುದು ಬೇರೆ ವಿಚಾರ. ಆದ್ದರಿಂದಲೇ 1891ರಲ್ಲಿ ವಾಯುವ್ಯ ರಾಜ್ಯದಲ್ಲಿ (ಅವಿಭಜಿತ ಭಾರತದಲ್ಲಿ, ಅದರಲ್ಲಿ ಆಗ್ರ, ಅವಧ್, ರೋಹಿಲ್ ಖಂಡ್ ಮತ್ತು ಬುಂದೇಲ್‌ಖಂಡ್ ಸೇರಿತ್ತು)- ನಡೆದ ಜನಗಣತಿಯ ಪ್ರಕಾರ 23,23,643 ಹಿಂದೂಗಳು ತಾವು ಯಾವುದೇ ನಿರ್ದಿಷ್ಟ ದೇವತೆಯ ಆರಾಧಕರೆಂದು ಸೂಚಿಸುವ ಬದಲು ಯಾವುದಾದರೊಬ್ಬ

ಮುಸ್ಲಿಮ್ ಸಂತರೊಂದಿಗೆ ತಮಗಿರುವ ಸಂಬಂಧವನ್ನು ಸೂಚಿಸಿದ್ದರು. ಆ ಮಹಾನುಭಾವರು ಹಿಂದೂಗಳ ದೊಡ್ಡ ಜನವಿಭಾಗದಲ್ಲಿ ತಮ್ಮ ಪ್ರಭಾವವನ್ನು ಬಿಟ್ಟು ಹೋದರು. ಆದರೆ ದುರದೃಷ್ಟವಶಾತ್ ನಾವಿಂದು ಅದನ್ನು ಉಪಯೋಗಪಡಿಸುವ ಸ್ಥಿತಿಯಲ್ಲಿಲ್ಲ.

## ಭಾರತದ ಹೊರಗೆ

ಭಾರತದ ಹೊರಗೂ ಈ ಪಾವನ ವ್ಯಕ್ತಿಗಳ ಕೂಟ ಸಲ್ಲಿಸಿದ ಸೇವೆ ಆಶ್ಚರ್ಯಕರ ಪರಿಣಾಮಗಳನ್ನು ಬೀರಿದೆ. ಮಧ್ಯಯುಗದಲ್ಲಿ ತಾರ್ತಾರಿಗಳು ಎಬ್ಬಿಸಿದ ಕ್ಷೋಭೆಯಿಂದ ದೊಡ್ಡ ದೊಡ್ಡ ಇಸ್ಲಾಮ್ ಸಾಮ್ರಾಜ್ಯಗಳು ನೆಲಕಚ್ಚಿದವು. ಆಗ ಮಧ್ಯ ಏಷ್ಯಾದಲ್ಲಿ ಅದನ್ನು ಎದುರಿಸಲು ಸೂಫಿವರ್ಯರ ಆಧ್ಯಾತ್ಮಿಕ ಶಕ್ತಿ ಮಾತ್ರವೇ ಬಾಕಿಯುಳಿದಿತ್ತೆಂಬುದು ಒಂದು ವಾಸ್ತವಿಕತೆಯಾಗಿದೆ. ಕೊನೆಗೆ ಈ ಶಕ್ತಿಯೇ ಇಸ್ಲಾಮಿನ ಮಹಾ ಶತ್ರುವಿನ ವಿರುದ್ಧ ವಿಜಯ ಸಾಧಿಸಿತು. ಲೋಕದಾದ್ಯಂತ ಇಸ್ಲಾಮಿನ ಬೆಳಕನ್ನು ಹರಡಿದ ಮಧ್ಯ ಏಷ್ಯಾವನ್ನು ನಾಶ ಪಡಿಸುವ ಹವಣಿಕೆಯಲ್ಲಿದ್ದ ತಾರ್ತಾರಿಗಳ ಮಹಾ ಕ್ಷೋಭೆಯನ್ನು ಎದುರಿಸಿದ ಆ ಶಕ್ತಿ ಇಂದು ನಂದಿಹೋಗಿದೆ. ಇಂದಿನ ಸೂಫಿಗಳೆಂದು ಹೇಳಿಕೊಳ್ಳುವವರು ಸ್ವತಃ ಅನಿಸ್ಲಾಮಿಕ ದೋಷಗಳಲ್ಲಿ ಸಿಲುಕಿಬಿಟ್ಟಿದ್ದಾರೆ. ಆದ್ದರಿಂದ ಇಸ್ಲಾಮಿನ ಅನುಗ್ರಹವನ್ನು ಲೋಕದಲ್ಲಿ ಪಸರಿಸುವ ನಿರೀಕ್ಷೆಯನ್ನು ಅವರಿಂದ ಖಂಡಿತ ಇಟ್ಟುಕೊಳ್ಳುವಂತಿಲ್ಲ.

### ಆಫ್ರಿಕಾದಲ್ಲಿ

ಇಂದು ಆ ಶಕ್ತಿ ಆಫ್ರಿಕಾದಲ್ಲಿ ಕಾರ್ಯತತ್ಪರವಾಗಿದೆ. ದೇವ ಧರ್ಮದ ಪ್ರಚಾರದಲ್ಲಿ ದೊರೆತಿರುವ ಮಹಾ ವಿಜಯಗಳು ನಮ್ಮ ದೇಶದ ಪ್ರಸಕ್ತ ಸೂಫಿ ಸಂತರಿಗೊಂದು ಪಾಠವಾಗಿದೆ. ಆಫ್ರಿಕಾದ ಸೂಫಿಗಳ ಕೂಟದಲ್ಲಿ 'ಜಮಾಅತ್ ಅಮೀರ್ ಗನಿಯ್ಯ' ಎಂಬುದೂ ಒಂದಾಗಿದೆ. ಅದರ ಸ್ಥಾಪಕರಾದ ಮುಹಮ್ಮದ್ ಉಸ್ಮಾನ್ ಅಲ್ ಅಮೀರ್ ಗನಿ ಎಂಬವರು 1838 ರಿಂದ 1853ರ ತನಕ ಪಶ್ಚಿಮ ಸುಡಾನ್‌ನಲ್ಲಿ ಮುಸ್ಲಿಮರ ಧಾರ್ಮಿಕ ಸುಧಾರಣೆಯ ಕೆಲಸವನ್ನು ನಿರ್ವಹಿಸಿದರು. ಜತೆಗೆ ಸುತ್ತಮುತ್ತಲಿನ ಹತ್ತಾರು ಮೂರ್ತಿಪೂಜಕ ಬುಡಕಟ್ಟುಗಳನ್ನು ಅವರು ಮುಸ್ಲಿಮರನ್ನಾಗಿ ಮಾಡಿದರು.

ಮತ್ತೊಂದು ಸಮೂಹ 'ಕಾದರಿಯ್ಯಾ' ಸಮೂಹವಾಗಿದೆ. ಪಶ್ಚಿಮ ಆಫ್ರಿಕಾದಲ್ಲಿ ಹಿಜರಿಶಕ ಒಂಭತ್ತನೇ ಶತಮಾನದಿಂದ ಈ ಸಮೂಹ ಕಾರ್ಯಪ್ರವೃತ್ತವಾಗಿದೆ. ಹತ್ತೊಂಬತ್ತನೇ ಶತಮಾನದ ಆರಂಭದಲ್ಲಿ ಈ ಸಮೂಹದ ಪುನರುತ್ಥಾನವಾಯಿತು. ಅವರು ಪಶ್ಚಿಮ ಸುಡಾನಿನಿಂದ ಟಿಂಬ್‌ಕಟೂ ಮತ್ತು ಸೆನೆಗಾಲ್‌ನ ತನಕ ತಮ್ಮ ವಲಯವನ್ನು ರಚಿಸಿಕೊಂಡರು. ವಿಶೇಷವಾಗಿ 'ನಾಂಗಾಟಿಂಬೋ' ಮತ್ತು 'ಮಸಾರಿದೋ' ಪ್ರದೇಶಗಳಲ್ಲಿ ಅವರ ದೊಡ್ಡ ವಲಯವಿತ್ತು. ಅಲ್ಲಿ ಅವರು ಮೂರ್ತಿ ಪೂಜಕ ಬುಡಕಟ್ಟುಗಳಲ್ಲಿ ಇಸ್ಲಾಮಿನ ಪ್ರಚಾರ ಆರಂಭಿಸಿದರು. ಅವರು ಯಾವುದೇ ಪ್ರದೇಶದಲ್ಲಿ ಇಸ್ಲಾಮಿನ ಪ್ರಚಾರಗೈದ ನಂತರ ಅಲ್ಲಿನ

ಚಾಣಾಕ್ಷ ಮತ್ತು ಪ್ರತಿಭಾವಂತ ಬಾಲಕರನ್ನು ಧಾರ್ಮಿಕ ಶಿಕ್ಷಣಪಡೆಯಲು ತಮ್ಮ ಕೇಂದ್ರೀಯ ವಲಯಗಳಿಗೆ ಕಳುಹಿಸಿಕೊಡುತ್ತಿದ್ದರು. ಅವರಲ್ಲಿ ಹೆಚ್ಚು ಪ್ರತಿಭೆ ಕಂಡು ಬಂದರೆ ಉನ್ನತ ಧಾರ್ಮಿಕ ಶಿಕ್ಷಣ ಪಡೆಯಲು ಅವರು ಅವರನ್ನು ಕೈರುವಾನ್ ಫಾಸ್ ಟ್ರಿಪೋಲಿ ಅಥವಾ ಈಜಿಪ್ಟ್‌ನ ಅಲ್‌ಅಝ್‌ಹರ್ ಕೇಂದ್ರಗಳಿಗೆ ಕಳುಹಿಸುತ್ತಿದ್ದರು. ಅಲ್ಲಿಂದ ಮರಳಿದ ನಂತರ ಅವರನ್ನು ಅವರ ಪ್ರದೇಶಗಳಲ್ಲಿ ಸಂದೇಶ ಪ್ರಚಾರ ಮಾಡಲು ಕಳುಹಿಸುತ್ತಿದ್ದರು. ಅಲ್ಲದೆ ಆಫ್ರಿಕಾದ ಒಳ ಪ್ರದೇಶಗಳಲ್ಲಿ ಅವರು ಹೇರಳ ಸಂಖ್ಯೆಯಲ್ಲಿ ಧಾರ್ಮಿಕ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿದರು. ಆ ಮೂಲಕ ಆಫ್ರಿಕಾದ ಕರಿಯ ಜನಾಂಗದ ಬಾಲಕರಿಗೆ ಸರಿಯಾದ ತರಬೇತಿ ನೀಡುವ ವ್ಯವಸ್ಥೆ ಮಾಡಿದರು.

ಮತ್ತೊಂದು ಸೂಫಿ ಸಮೂಹ ತೇಜಾನಿಯಾ ಎಂಬ ಹೆಸರಿನಿಂದ ಪ್ರಸಿದ್ಧವಿದೆ. ಅದು ಅಲ್‌ಜೀರಿಯಾದಲ್ಲಿ ಸ್ಥಾಪನೆಗೊಂಡಿತ್ತು. ಅದರ ತತ್ವಾದರ್ಶಗಳು 'ಕಾದಿರಿಯ್ಯ' ಸಮೂಹವನ್ನು ಹೋಲುತ್ತವೆ. ವ್ಯತ್ಯಾಸವೆಂದರೆ ಅವರು ಸಂದೇಶ ಪ್ರಚಾರದ ಜತೆಗೆ ಧರ್ಮಯುದ್ಧವನ್ನೂ(ಜಿಹಾದ್) ನಡೆಸುತ್ತಿದ್ದರು. ಆದ್ದರಿಂದ ಕ್ರೈಸ್ತಮಿಶನರಿಗಳಿಗೆ ಅವರ ವಿರುದ್ಧ ಯುರೋಪಿನ ಸಾಮ್ರಾಜ್ಯಶಾಹಿಗಳ ನೆರವು ಪಡೆಯಲು ನೆವನ ದೊರೆಯಿತು. ಅವರು ಉತ್ತರ ಆಫ್ರಿಕಾದ ಪಶ್ಚಿಮ ಭಾಗದಲ್ಲಿ ಸಕ್ರಿಯರಾಗಿದ್ದರು. ಅಲ್‌ಹಾಜ್ ಉಮರ್ ಅವರ ಅತ್ಯಂತ ಸಕ್ರಿಯ ಸಂದೇಶ ಪ್ರಚಾರಕರಾಗಿದ್ದರು. ಅವರು ತಮ್ಮ ದೇವಭಯ-ಭಕ್ತಿ ಮತ್ತು ನಿಷ್ಠೆಯಿಂದಾಗಿ ಆಫ್ರಿಕಾದಿಂದ ಅರೇಬಿಯಾದ ತನಕ ಪ್ರಖ್ಯಾತರಾಗಿದ್ದರು. ಈ ಸಮೂಹ 1833ರಲ್ಲಿ ತಮ್ಮ ಸಂದೇಶ-ಪ್ರಚಾರದ ಕೆಲಸವನ್ನು ಆರಂಭಿಸಿತು. ತದನಂತರ ಉತ್ತರ ನೈಜೀರಿಯಾ ಮತ್ತು ಸೆನೆಗಾಲ್ ತನಕದ ಮೂರ್ತಿಪೂಜಕ ಜನಾಂಗಗಳನ್ನು ಮುಸ್ಲಿಮರನ್ನಾಗಿ ಮಾಡಿ ಪ್ರಬಲ ಸಾಮ್ರಾಜ್ಯವೊಂದನ್ನು ಸ್ಥಾಪಿಸಿತು. ಅನಂತರ ಈ ಸಾಮ್ರಾಜ್ಯವನ್ನು ಫ್ರಾನ್ಸಿನ ಸಾಮ್ರಾಜ್ಯಶಾಹಿಗಳು ಕೊನೆಗೊಳಿಸಿದರು.

ಈ ಸಮೂಹಗಳಲ್ಲಿ ಅತ್ಯಂತ ಪ್ರಬಲವಾದುದು 'ಸನೂಸಿ' ಸಮೂಹವಾಗಿತ್ತು. 1833ರಲ್ಲಿ ಅಲ್‌ಜೀರಿಯಾದ ಸುಪ್ರಸಿದ್ಧ ವಿದ್ವಾಂಸರಾದ 'ಸೈಯದ್ ಮುಹಮ್ಮದ್ ಬಿನ್ ಅಲಿ ಅಲ್ ಸನೂಸಿ' ಸನೂಸಿ ಪಂಥವನ್ನು ಆರಂಭಿಸಿದರು. ಅದರ ಉದ್ದೇಶ ಮುಸ್ಲಿಮರ ಸುಧಾರಣೆ, ಪಾಶ್ಚಾತ್ಯ ಸಾಮ್ರಾಜ್ಯಶಾಹಿತ್ವವನ್ನು ಎದುರಿಸುವುದು ಮತ್ತು ಇಸ್ಲಾಮಿನ ಸಂದೇಶ ಪ್ರಚಾರವಾಗಿತ್ತು. ಇಪ್ಪತ್ತೆರಡು ವರ್ಷಗಳ ಅವಧಿಯಲ್ಲಿ ಅವರು ಪ್ರಬಲ ಸಮೂಹವೊಂದನ್ನು ರಚಿಸಿದರು. ಅವರ ಜಾಲ ಸಾಮ್ರಾಜ್ಯವೊಂದರ ವ್ಯೂಹಕ್ಕಿಂತ ಪ್ರಬಲವಾಗಿತ್ತು. ಅದರ ಪ್ರತಿಯೊಬ್ಬ ವ್ಯಕ್ತಿ ಸಮೂಹದ ಧ್ಯೇಯವನ್ನು ಸಾಧಿಸುವ ಗುರಿಹೊಂದಿದ್ದನು. ಅದರ ಪ್ರತಿಯೊಬ್ಬ ಸದಸ್ಯನಿಗೆ ಪರಿಶುದ್ಧ ಇಸ್ಲಾಮಿ ತರಬೇತಿಯನ್ನು ನೀಡಿ ನೈಜ ಮುಸ್ಲಿಮನನ್ನಾಗಿ ಮಾಡಲಾಗಿತ್ತು. ಕುರ್‌ಆನ್‌ನ ಪ್ರತಿಯೊಂದು ಆಜ್ಞೆಯನ್ನು ಪಾಲಿಸುವುದು ಅವರ ಸಮೂಹದ ಮೊದಲ ಶರ್ತವಾಗಿತ್ತು. ಔಲಿಯಾಗಳ ಆರಾಧನೆ, ಗೋರಿಪೂಜೆ, ಕಾಫಿ ಮತ್ತು ಧೂಮಪಾನಗಳು ನಿಷಿದ್ಧವಾಗಿದ್ದವು. ಅದೇ ರೀತಿ ಕ್ರೈಸ್ತ ಮತ್ತು ಯಹೂದ್ಯರೊಂದಿಗೆ ಸ್ನೇಹ ಸಂಬಂಧವೂ ನಿಷಿದ್ಧವಾಗಿತ್ತು. ಅವರ ಪೈಕಿ ಪ್ರತಿಯೊಬ್ಬ

ವ್ಯಕ್ತಿಯೂ ಓರ್ವ ಇಸ್ಲಾಮಿ ಹೋರಾಟಗಾರನ ಜೀವನ ಸಾಗಿಸುತ್ತಿದ್ದನು. ಈಜಿಪ್ಟಿನಿಂದ ಮೊರೊಕ್ಕೋದ ತನಕ ಮತ್ತು ಟ್ರಿಪೋಲಿಯ ತೀರ ಪ್ರದೇಶಗಳಿಂದ ಆಫ್ರಿಕಾದ ಮರುಭೂಮಿಯ ಅಂಚಿನ ತನಕ ಅವರು ವ್ಯಾಪಕವಾಗಿ ತಮ್ಮ ಧರ್ಮಶಾಲೆಗಳನ್ನು ಹರಡಿದ್ದರು. ಆಫ್ರಿಕಾ ಪ್ರದೇಶ ಮಾತ್ರವಲ್ಲದೆ ಅರೇಬಿಯಾ, ಇರಾಕ್ ಮತ್ತು ಮಲಾಯಾ ದ್ವೀಪದಲ್ಲೂ ಅವರು ಪ್ರಭಾವ ಬೀರಿದ್ದರು. ಅವರ ಸಂದೇಶ ಪ್ರಚಾರ ಚಟುವಟಿಕೆಗಳಿಂದಾಗಿ ಕೇವಲ ನಾಮ ಮಾತ್ರ ಮುಸ್ಲಿಮರಾಗಿ ಉಳಿದಿದ್ದ ಆಫ್ರಿಕಾದ ಅನೇಕ ಜನಾಂಗಗಳು ನೈಜ ಮುಸ್ಲಿಮರಾಗಿ ಮಾರ್ಪಟ್ಟಿದ್ದರು. ಗಾಲಾ, ಬಟ್‌ಸಿಟಿ ಮತ್ತು ಬೋರ್‌ಕೋ ಪ್ರದೇಶಗಳಲ್ಲಿ ಅವರು ಇಸ್ಲಾಮಿನ ಸ್ಫೂರ್ತಿಯನ್ನು ತುಂಬಿದರು. ಕಾದಿರಿಯ್ಯ ಪಂಥದವರಂತೆ, ಇವರಲ್ಲಿಯೂ ನವ ಮುಸ್ಲಿಮರಿಗೆ ಹಿತೋಪದೇಶಗಳ ಜತೆಗೆ ಅವರು ತಮ್ಮ ಜನಾಂಗಗಳಲ್ಲಿ ಇಸ್ಲಾಮಿನ ಪ್ರಚಾರಗೆಯ್ಯಲು ಅವರಿಗೆ ಪ್ರಾಯೋಗಿಕ ತರಬೇತಿಯನ್ನೂ ನೀಡಲಾಗುತ್ತಿತ್ತು. ಆಫ್ರಿಕಾದ ಈ ಸಮೂಹ ಅಲ್ಲಿನ ಬುಡಕಟ್ಟುಗಳಲ್ಲಿ ಹೊಸ ಜೀವನವನ್ನು ಮೂಡಿಸಿತು. ಈ ಕುರಿತು ಐರೋಪ್ಯ ಯಾತ್ರಿಕನೊಬ್ಬ ಹೀಗೆ ಬರೆಯುತ್ತಾನೆ-

"ನೈಜೀರಿಯಾದ ಹೊಳೆಯ ದಂಡೆಯ ಮೂಲಕ ಮಧ್ಯ ಆಫ್ರಿಕಾದೆಡೆಗೆ ಸಾಗಿದಾಗ, ಆಫ್ರಿಕಾದ ಜನರ ಬರ್ಬರತೆ, ಕರಾಳತೆ ಮತ್ತು ನರಭಕ್ಷಕ ಪ್ರವೃತ್ತಿಯ ಕುರಿತು ನನಗಿದ್ದ ಭಾವನೆಯನ್ನು ಸುಮಾರು ಇನ್ನೂರು ಕಿಲೋ ಮೀಟರ್‌ನ ತನಕ ಬದಲಿಸುವ ಅಗತ್ಯ ನನಗೆ ತಲೆದೋರಲಿಲ್ಲ. ಆದರೆ ಮಧ್ಯ ಸುಡಾನಿಗೆ ತಲಪಿದಾಗ ನನಗೆ ಅಲ್ಲಿನ ಬುಡಕಟ್ಟುಗಳಲ್ಲಿ ಅತ್ಯಂತ ಪ್ರಗತಿಪರ ಲಕ್ಷಣಗಳು ಗೋಚರಿಸಿದವು. ಅದನ್ನು ಕಂಡು ನನಗೆ ನನ್ನ ಅಭಿಪ್ರಾಯಗಳನ್ನು ಬದಲಿಸಬೇಕಾಯಿತು. ಅಲ್ಲಿ ನರಭಕ್ಷಕ ಪ್ರವೃತ್ತಿ ಅಸ್ತಿತ್ವದಲ್ಲಿರಲಿಲ್ಲ. ಮೂರ್ತಿಪೂಜೆ ಕೊನೆಗೊಂಡಿತ್ತು. ಮದ್ಯಪಾನದಂತಹ ದುರಭ್ಯಾಸಗಳು ದೂರವಾಗಿದ್ದುವು. ಎಲ್ಲಾ ಬುಡಕಟ್ಟುಗಳಿಗೆ ಸೇರಿದವರು ಬಟ್ಟೆ ಧರಿಸುತ್ತಿದ್ದರು. ಅವರ ಉಡುಗೆ ತೊಡುಗೆಯಲ್ಲಿ ಸ್ವಚ್ಛತೆ, ಪರಿಶುದ್ಧತೆ ಮತ್ತು ಅವರ ಸಮಾಜದಲ್ಲಿ ನಾಗರಿಕತೆ ಎದ್ದು ಕಾಣುತ್ತಿತ್ತು. ನೈತಿಕವಾಗಿ ಅವರು ತಮ್ಮ ಸಹ ಜನಾಂಗಗಳಿಗಿಂತ ಬಹಳ ಉನ್ನತ ಮಟ್ಟದಲ್ಲಿರುವುದು ಕಂಡು ಬರುತ್ತಿತ್ತು. ಅವರು ನಿರಂತರ ಪ್ರಗತಿಯತ್ತ ಸಾಗಿರುವ ಲಕ್ಷಣಗಳು ಕಂಡು ಬರುತ್ತಿತ್ತು. ಅವರ ಕಿರಾತ ಪ್ರವೃತ್ತಿ ಉನ್ನತ ಸ್ವಭಾವವಾಗಿ ಪರಿವರ್ತನೆಗೊಂಡಿತ್ತು. ಇದೆಲ್ಲವೂ ಇಸ್ಲಾಮಿನ ಕೊಡುಗೆಯಾಗಿದೆ. 'ಲೋಕೋಜಾ'ವನ್ನು ದಾಟಿದ ನಂತರ ನಾನು ಇಸ್ಲಾಮಿನ ಸಂದೇಶ ಪ್ರಚಾರ ಕೇಂದ್ರವನ್ನು ತಲಪಿದೆ. ಅಲ್ಲಿ ಉನ್ನತ ಮಟ್ಟದ ಸುವ್ಯವಸ್ಥಿತ ಸರಕಾರ ಸ್ಥಾಪಿತವಾಗಿರುವಂತೆ ನನಗೆ ಭಾಸವಾಯಿತು. ಎಲ್ಲೆಡೆ ಜನರಲ್ಲಿ ನಾಗರಿಕತೆಯ ಲಕ್ಷಣಗಳು ಕಂಡು ಬರುತ್ತಿದ್ದುವು. ವ್ಯಾಪಾರ ಮತ್ತು ಕೈಗಾರಿಕೆಗಳು ಕಾರ್ಯತತ್ಪರವಾಗಿದ್ದುವು. ನಾನೊಂದು ಸುಸಂಸ್ಕೃತ ರಾಷ್ಟ್ರದಲ್ಲಿದ್ದೇನೆಂದು ಭಾಸವಾಗುತ್ತಿತ್ತು.

....................

ಅಧ್ಯಾಯ:4

# ಆಫ್ರಿಕಾದಲ್ಲಿ ಇಸ್ಲಾಮಿನ ಪ್ರಚಾರ

**ಮು**ಸ್ಲಿಮರಲ್ಲಿ ವಿಧ್ಯುಕ್ತ ಮಿಶನರಿ ಸಂಸ್ಥೆಗಳು ಎಂದೂ ಅಸ್ತಿತ್ವದಲ್ಲಿರಲಿಲ್ಲ ಎಂದು ನಾನು ಅನೇಕ ಬಾರಿ ಪ್ರಸ್ತಾವಿಸಿದ್ದೇನೆ. ಇದಕ್ಕೆ ಕಾರಣವೇನೆಂದರೆ ಧರ್ಮದ ಸೇವೆಯನ್ನು ಇಸ್ಲಾಮ್ ಯಾವುದೇ ನಿರ್ದಿಷ್ಟ ವರ್ಗಕ್ಕೆ ಮೀಸಲುಗೊಳಿಸಿಲ್ಲ. ಪ್ರತಿಯೊಬ್ಬ ಮುಸ್ಲಿಮನೂ ತನಗೆ ಸಾಧ್ಯವಿರುವಷ್ಟರ ಮಟ್ಟಿಗೆ ತನ್ನೆಲ್ಲಾ ಶಕ್ತಿಯನ್ನು ವಿನಿಯೋಗಿಸಿ ಧರ್ಮದ ಸೇವೆ ಗೈಯಬೇಕೆಂಬ ಶರ್ತವನ್ನು ಅದು ವಿಧಿಸಿದೆ. ಕ್ರೈಸ್ತರಲ್ಲಿ ನಿರ್ದಿಷ್ಟ ವರ್ಗವಲ್ಲದೆ ಬೇರಾರೂ ಧಾರ್ಮಿಕ ವಿಷಯಗಳಲ್ಲಿ ಹಸ್ತಕ್ಷೇಪ ನಡೆಸುವುದಿಲ್ಲ. ಅವರಿಗೆ ಧರ್ಮದ ವಿಷಯದಲ್ಲಿ ಆಸಕ್ತಿಯೂ ಇರುವುದಿಲ್ಲ. ಹಾಗೆಯೇ ಮುಸ್ಲಿಮರಲ್ಲೂ ಧಾರ್ಮಿಕ ವಿಭಾಗವೊಂದನ್ನು ರಚಿಸುತ್ತಿದ್ದರೆ ಅವರಲ್ಲಿಯೂ ಧರ್ಮ ಪ್ರಚಾರಾಸಕ್ತಿ ಸೀಮಿತ ಸಮೂಹದಲ್ಲಿ ಮಾತ್ರ ಉಳಿದು ಬಿಡುವ ಸಾಧ್ಯತೆಯಿತ್ತು. ಸಾಮಾನ್ಯ ಮುಸ್ಲಿಮರು ಪ್ರಾಯಶಃ ಈ ಆಸಕ್ತಿಯಿಂದ ಮುಕ್ತರಾಗಿರುತ್ತಿದ್ದರು.

ಇಸ್ಲಾಮ್ ಪ್ರಜಾಸತ್ತಾತ್ಮಕ ಸ್ಫೂರ್ತಿಯನ್ನು ಹೊಂದಿರುವ ಧರ್ಮವಾಗಿದೆ. ಅದರ ಪ್ರಕಾರ ಮೇಲ್ಮೆ ಸತ್ಕರ್ಮವನ್ನು ಅವಲಂಬಿಸಿದೆ. ಆದ್ದರಿಂದಲೇ ಅದು ಧರ್ಮಪ್ರಚಾರದ ಕರ್ತವ್ಯವನ್ನೂ ಸಾರ್ವತ್ರಿಕಗೊಳಿಸಿದೆ. ಆದ್ದರಿಂದಲೇ ಇಂದಿಗೂ ವಿವಿಧ ಧರ್ಮಾನುಯಾಯಿಗಳ ಪೈಕಿ ಅತಿ ಹೆಚ್ಚು ಧರ್ಮ ಪ್ರಚಾರಾಸಕ್ತಿ ಮುಸ್ಲಿಮರಲ್ಲೇ ಕಂಡು ಬರುತ್ತದೆ. ಅದರ ಪ್ರತಿಯೋರ್ವ ವ್ಯಕ್ತಿಯೂ ಸಂದೇಶ ಪ್ರಚಾರಕನ ಸ್ಥಾನ ಹೊಂದಿದ್ದಾನೆ.

ಹಿಂದಿನ ಪುಟಗಳಲ್ಲಿ ಈ ಸಂದೇಶ ಪ್ರಚಾರಾಸಕ್ತಿಯ ಸಾರ್ವತ್ರಿಕತೆಯ ಬಗ್ಗೆ ಪ್ರಸ್ತಾವಿಸಿದ್ದೇನೆ. ಇನ್ನು ಈ ಧರ್ಮ ಪ್ರಚಾರಾಸಕ್ತಿ ಹೇಗೆ ರಾಷ್ಟ್ರಗಳನ್ನು ಜಯಿಸುವಲ್ಲಿ ಸಫಲವಾಯಿತು ಎಂಬುದರ ಕಡೆಗೆ ಬೆಳಕು ಚೆಲ್ಲುವುದು ಅವಶ್ಯಕವಾಗಿದೆ. ಇಸ್ಲಾಮಿಗೆ ವಿಶ್ವವ್ಯಾಪಿ ಜನಪ್ರಿಯತೆಯನ್ನು ತಂದುಕೊಟ್ಟವರಾರು ಎಂದು ತಿಳಿದುಕೊಳ್ಳಬೇಕಾಗಿದೆ. ಭಾರತ (ಅರ್ಥಾತ್, ಭಾರತ, ಪಾಕಿಸ್ತಾನ ಮತ್ತು ಬಾಂಗ್ಲಾದೇಶವನ್ನೊಳಗೊಂಡ ಉಪಖಂಡ) ಇರಾನ್, ಅರೇಬಿಯಾ ಮತ್ತು ಈಜಿಪ್ಟಿನಂತಹ ರಾಷ್ಟ್ರಗಳಲ್ಲಿ ಮುಸ್ಲಿಮರು ಆಳ್ವಿಕೆಯನ್ನೂ ನಡೆಸಿದರು. ಆದ್ದರಿಂದ ಇಸ್ಲಾಮಿನ ವಿರೋಧಿಗಳಿಗೆ ಇಸ್ಲಾಮ್ ಖಡ್ಗದಿಂದ ಪಸರಿಸಿತು ಎಂದು ಹೇಳುವ ಅವಕಾಶ ದೊರೆಯುತ್ತದೆ. ಆಫ್ರಿಕಾ, ಚೀನಾ ಮತ್ತು ಮಲಾಯಾ ದ್ವೀಪಗಳ ಉದಾಹರಣೆಯನ್ನೂ ನಾವು ಮುಂದಿಟ್ಟುಕೊಳ್ಳಬೇಕಾಗಿದೆ. ಅಲ್ಲಿ ಮುಸ್ಲಿಮರಿಗೆ ಖಡ್ಗವನ್ನು ಉಪಯೋಗಿಸುವ ಅವಕಾಶವೇ ದೊರೆಯಲಿಲ್ಲವೆಂದು ಇಸ್ಲಾಮಿನ ವಿರೋಧಿಗಳೂ ಸಮ್ಮತಿಸುತ್ತಾರೆ. ಅದಕ್ಕಿಂತ ಹೆಚ್ಚು ತಾರ್ತಾರಿಗಳ ಸಾಮ್ರಾಜ್ಯ ಮತ್ತು ತುರ್ಕಿಸ್ತಾನದಲ್ಲಿ ಶಸ್ತ್ರ ಸಜ್ಜಿತವಾದ ಸತ್ಯನಿಷೇಧಿಗಳನ್ನು ಅಮಾಯಕರಾದ ಮುಸ್ಲಿಮರು ಸೋಲಿಸಿದಂತಹ ಉದಾಹರಣೆಗಳಿವೆ. ಈ ಉದಾಹರಣೆಗಳ ಮೂಲಕ ಧಾರ್ಮಿಕ ಶ್ರದ್ಧೆಯನ್ನು ಹೊಂದಿದ್ದ

ಮುಸ್ಲಿಮರು ಈ ಧರ್ಮದ ಸೇವೆಯನ್ನು ಯಾವ ರೀತಿ ಸಲ್ಲಿಸಿದ್ದಾರೆಂದು ನಾವು ವಾಚಕರಿಗೆ ತಿಳಿಸಬಯಸುತ್ತೇವೆ. ಇದೇ ರೀತಿಯ ಧಾರ್ಮಿಕ ಸ್ಫೂರ್ತಿಯೊಂದಿಗೆ ಸಕ್ರಿಯರಾದರೆ ಇಸ್ಲಾಮಿನ ಪ್ರಚಾರ ಮತ್ತು ಸಂರಕ್ಷಣೆಯ ಸಮಸ್ಯೆಯನ್ನು ಪರಿಹರಿಸಲು ನಮಗೆ ಸಾಧ್ಯವಿದೆ. ಅದಕ್ಕಾಗಿ ಇಂದು ಅನೇಕ ಸಮ್ಮೇಳನಗಳನ್ನು ಜರಗಿಸಲಾಗುತ್ತದೆಯೇ ಹೊರತು ನೈಜ ಸಮಸ್ಯೆಯೆಡೆಗೆ ಗಮನ ಹರಿಸಲಾಗುವುದಿಲ್ಲ. ಈ ನಿಟ್ಟಿನಲ್ಲಿ ಮೊಟ್ಟ ಮೊದಲು ನಾವು ಆಫ್ರಿಕಾದ ಉದಾಹರಣೆಯನ್ನು ನೋಡೋಣ.

## ಆಫ್ರಿಕಾದಲ್ಲಿ ಇಸ್ಲಾಮಿನ ಅರುಣೋದಯ

ಪಶ್ಚಿಮ ಸುಡಾನ್‌ನಲ್ಲಿ ಮೊಟ್ಟ ಮೊದಲು ವ್ಯಾಪಾರಾರ್ಥವಾಗಿ ಅಲ್ಲಿ ಸಂಚಾರ ನಡೆಸುತ್ತಿದ್ದ ಬರ್ಬರ್ ಜನಾಂಗಕ್ಕೆ ಸೇರಿದ ನವಮುಸ್ಲಿಮರು ಇಸ್ಲಾಮಿನ ಪ್ರಚಾರ ಮಾಡಿದರು. ಈ ಬರ್ಬರ್ ಜನಾಂಗಗಳ ಪೈಕಿ ಲಮ್ತೂನಾ ಮತ್ತು ಜದಾಲಾ ಎಂಬ ಎರಡು ಗೋತ್ರಗಳು 'ಯೂಸುಫ್ ಬಿನ್ ತಾಷ್ಕೀನ್'ರ ಕಾಲದಲ್ಲಿ ಸಮಸ್ತ ಪಶ್ಚಿಮ ಸೂಡಾನ್‌ನಲ್ಲಿ ಇಸ್ಲಾಮಿನ ಪ್ರಕಾಶವನ್ನು ಹರಡಿತು. ಹಿಜರಿಶಕ ಐದನೇ ಶತಮಾನದಲ್ಲಿ ಈ ಬರ್ಬರ್ ವ್ಯಾಪಾರಸ್ತರು ಗಾನಾದ (Ghana) ನೀಗ್ರೋಗಳ ರಾಜ್ಯಗಳನ್ನು ಇಸ್ಲಾಮ್ ಸ್ವೀಕರಿಸುವಂತೆ ಮಾಡಿದರು. ಅನಂತರ ಸೂಡಾನ್‌ನ ಅತ್ಯಂತ ಪ್ರಾಚೀನ ರಾಜ್ಯವಾದ 'ಸೂಂಗಾಯಿ' (Songhay) ಸಹ ಅವರ ಮೂಲಕ ಇಸ್ಲಾಮಿನ ವಶವಾಯಿತು. ಹಿಜರಿಶಕ ಆರನೇ ಶತಮಾನದಲ್ಲಿ ಅವರ ಪ್ರಭಾವ ದೂರದೂರಕ್ಕೆ ಹರಡುತ್ತಾ ಹೋಯಿತು. ಅನಂತರ 'ಟಿಂಬ್ ಕಟು'ವಿನ ಪ್ರಸಿದ್ಧ ವಾಣಿಜ್ಯ ನಗರ ಇಸ್ಲಾಮಿನ ಪ್ರಚಾರದ ಅತಿ ದೊಡ್ಡ ಕೇಂದ್ರವಾಗಿ ಪರಿಣಮಿಸಿತು. ಅನೇಕ ನೀಗ್ರೋಗಳು ವ್ಯಾಪಾರಾರ್ಥವಾಗಿ ಅಲ್ಲಿಗೆ ಬರುತ್ತಿದ್ದರು. ಬರ್ಬರ್ ವ್ಯಾಪಾರಸ್ತರ ಮೂಲಕ ಇಸ್ಲಾಮಿನ ಅಮೂಲ್ಯ ಸರಕನ್ನು ಪಡೆದು ಅವರು ಸುಡಾನ್ ಮತ್ತು ನೈಜೀರಿಯಾ ಪ್ರದೇಶಗಳಲ್ಲಿ ಹರಡಿ ಬಿಡುತ್ತಿದ್ದರು. ಅವರಲ್ಲಿ ಎಷ್ಟು ಅತೀವವಾದ ಧರ್ಮ ಪ್ರಚಾರಾಸಕ್ತಿಯಿತ್ತೆಂದರೆ, ಇಬ್ನ್ ಬತೂತ ಅಲ್ಲಿಗೆ ತಲಪಿದಾಗ ಅವರ ಕುರಿತು ಹೀಗೆ ಬರೆಯುತ್ತಾನೆ,

"ಈ ಜನರು ಕುರ್‌ಆನ್‌ನ ಬಗ್ಗೆ ಮೋಹ ಉಳ್ಳವರಾಗಿದ್ದಾರೆ. ನಮಾಝಿನಲ್ಲಿ ಇವರು ಎಷ್ಟು ಕಟ್ಟುನಿಟ್ಟು ಪಾಲಿಸುತ್ತಿದ್ದರೆಂದರೆ ಶುಕ್ರವಾರದ ದಿನ ಬೆಳಗ್ಗಿನಿಂದಲೇ ಮಸೀದಿಯಲ್ಲಿ ಹೋಗಿ ಕುಳಿತುಕೊಳ್ಳದಿದ್ದರೆ ಜಾಗ ಸಿಗುವುದೇ ಕಷ್ಟವಾಗಿತ್ತು."

ಈ ನವಮುಸ್ಲಿಮ್ ಸಮುದಾಯಗಳ ಪೈಕಿ ಇಸ್ಲಾಮಿನ ಅತ್ಯಂತ ಸಕ್ರಿಯ ಪ್ರಚಾರ ಕೈಗೊಂಡ ಕೀರ್ತಿ 'ಮಾಂಡ್‌ನಗೂ' ಗೋತ್ರಕ್ಕೆ ಸಲ್ಲುತ್ತದೆ. ತಮ್ಮ ನಡೆನುಡಿಗಳಿಂದಾಗಿ ಈ ಜನಾಂಗ ಸಮಸ್ತ ಆಫ್ರಿಕಾದಲ್ಲಿ ಜನಪ್ರಿಯವಾಗಿತ್ತು. 'ಹಾವುಸಾ' ಗೋತ್ರ ಅವರ ಪ್ರಯತ್ನಗಳಿಂದಾಗಿ ಇಸ್ಲಾಮ್ ಸ್ವೀಕರಿಸಿದ್ದು ಅವರ ಅತಿ ದೊಡ್ಡ ಸಾಧನೆಯಾಗಿದೆ. 'ಹಾವುಸಾ' ಗೋತ್ರ ಮಧ್ಯೋತ್ತರ ಆಫ್ರಿಕಾದಲ್ಲಿ ಅತ್ಯಂತ ಚಾಣಾಕ್ಷ, ಕ್ರಿಯಾಶೀಲ ವ್ಯಾಪಾರಿ ಜನಾಂಗವೆಂದು ಪರಿಗಣಿಸಲ್ಪಡುತ್ತಿತ್ತು. ಅದು ಸುಡಾನ್ ಮತ್ತು ನೈಜೀರಿಯಾದ ವ್ಯಾಪಾರವನ್ನು

ತನ್ನ ವಶದಲ್ಲಿರಿಸಿಕೊಂಡಿತ್ತು. ಗ್ಯಾನಾದಿಂದ ಕೈರೋದ ತನಕ ಆ ಜನಾಂಗದ ವ್ಯಾಪಾರಿ ಕಾರವಾನಗಳು ಸಂಚಾರ ನಡೆಸುತ್ತಿದ್ದುವು. ಇಸ್ಲಾಮಿನ ಪ್ರಚಾರದ ನಿಟ್ಟಿನಲ್ಲಿ ಈ ವ್ಯಾಪಾರಿ ಜನಾಂಗ ನಡೆಸಿದ ಪ್ರಬಲ ಪ್ರಯತ್ನಗಳ ಪ್ರಸ್ತಾಪ ಮುಂದೆ ಬರುತ್ತದೆ.

ಪಶ್ಚಿಮ ಸೂಡಾನಿನಲ್ಲಿ ಈಜಿಪ್ಟಿನ ವ್ಯಾಪಾರಸ್ತರು ಇಸ್ಲಾಮಿನ ಪ್ರಚಾರ ಕೈಗೊಂಡರು. ವಿಶೇಷವಾಗಿ ಈಜಿಪ್ಟಿನಲ್ಲಿ ಫಾತಿಮಿ ಖಿಲಾಫತ್ ಕೊನೆಗೊಂಡಾಗ ಅನೇಕ ಅರಬರು ಸುಡಾನ್‌ನಲ್ಲಿ ಆಶ್ರಯ ಪಡೆದರು. ಅವರು ಈ ಪ್ರದೇಶದಲ್ಲಿ ಎಲ್ಲೆಡೆ ಇಸ್ಲಾಮಿನ ಪ್ರಚಾರ ಮಾಡಿದರು. ಈ ಪ್ರದೇಶದಲ್ಲಿ ಟ್ಯೂನಿಸ್ ಮತ್ತು ತಂಜಾನಿಯಾದ ಅರಬ್ ವ್ಯಾಪಾರಿಗಳು ಕೂಡ ಸಂದೇಶ ಪ್ರಚಾರದ ಮಹತ್ತರ ಕೆಲಸವನ್ನು ನಿರ್ವಹಿಸಿದರು. ವಿಶೇಷವಾಗಿ ನೈಋತ್ಯ ಸುಡಾನ್ ಅವರ ಪ್ರಯತ್ನಗಳ ಮೂಲಕವೇ ಸನ್ಮಾರ್ಗದಿಂದ ಪುನೀತವಾಯಿತು. ಅನಂತರ ಅಹ್ಮದ್ ಎಂಬ ಅರಬ್ ನಿವಾಸಿಯೊಬ್ಬ 'ದಾರ್‌ಫೂರ್'ನಲ್ಲಿ ಇಸ್ಲಾಮಿ ಸರಕಾರವನ್ನೂ ಸ್ಥಾಪಿಸಿದರು. ಅದನ್ನು ಹಲವು ನೂರು ವರ್ಷಗಳ ನಂತರ ಮುಹಮ್ಮದ್ ಅಲಿ ಪಾಷಾ ತನ್ನ ಸರಕಾರದಲ್ಲಿ ಲೀನಗೊಳಿಸಿಕೊಂಡರು.

## ಹದಿನೆಂಟನೆಯ ಶತಮಾನದ ಕೊನೆಯಲ್ಲಿ

ಹದಿನೆಂಟನೆಯ ಶತಮಾನದ ಕೊನೆಯಲ್ಲಿ ಉತ್ತರ ಆಫ್ರಿಕಾದ ಮುಸ್ಲಿಮರಲ್ಲಿ ಸಂದೇಶ ಪ್ರಚಾರದ ಹೊಸ ಸ್ಫೂರ್ತಿ ಬೆಳೆಯಿತು. ಶೇಖ್ ಉಸ್ಮಾನ್ ವಾನ್‌ಫೋದಿಯೋ ಅದಕ್ಕೆ ಬುನಾದಿ ಹಾಕಿದರು. ಅವರು ಅಬ್ದುಲ್ ವಹ್ಹಾಬ್ ನಜ್ದಿಯವರ ಬೋಧನೆಗಳಿಂದ ಪ್ರೇರಿತರಾಗಿ ಮರೆತು ಹೋದ ಒಳಿತಿನ ಪ್ರಚಾರ ಮತ್ತು ಕೆಡುಕಿನ ನಿರ್ಮೂಲನದ ಕರ್ತವ್ಯವನ್ನು ಪುನರ್ ಸ್ಥಾಪಿಸಿದರು. ವಿಶೇಷವಾಗಿ ಅದು ಫುಲ್ಬೆ (Fulbe) ಸಮುದಾಯದಲ್ಲಿ ನವಜಾಗೃತಿಯನ್ನು ಮೂಡಿಸಿತು. ಆದ್ದರಿಂದ ಆ ಸಮುದಾಯ ಇಸ್ಲಾಮಿನ ಸೇವೆಗಾಗಿ ಟೊಂಕಕಟ್ಟಿ ಸಿದ್ಧವಾಯಿತು. ಅದು ಗೋಬರ್ (Gobar) ಎಂಬ ಪ್ರಾಚೀನ ಪ್ರಾಂತ್ಯದಿಂದ ಮೂರ್ತಿ ಪೂಜೆಯನ್ನು ನಾಮಾವಶೇಷಗೊಳಿಸಿತಲ್ಲದೆ ಸಮಸ್ತ 'ಹಾವುಸಾಲ್ಯಾಂಡ್' ಪ್ರದೇಶವನ್ನು ಸತ್ಯನಿಷೇಧ ಮತ್ತು ಬಹುದೇವಾರಾಧನೆಯ ಮೈಲಿಗೆಯಿಂದ ಮುಕ್ತಗೊಳಿಸಿತು. ಕ್ರಿ.ಶ. 1816ರಲ್ಲಿ ಉಸ್ಮಾನ್ ವಾನ್ ಫೋದಿಯೋ ನಿಧನರಾದಾಗ ಅವರು ಸಮಸ್ತ 'ಹಾವುಸಾ' ರಾಜ್ಯದ ಪ್ರಬಲ ಅರಸರಾಗಿದ್ದರು. ಅದರ ಸುತ್ತಮುತ್ತಲಿನ ಪ್ರದೇಶಗಳಲ್ಲೆಲ್ಲೂ ಮೂರ್ತಿ ಪೂಜೆಯ ಛಾಪು ಕಂಡು ಬರುತ್ತಿರಲಿಲ್ಲ. ಕ್ರಿ.ಶ. 1900ರಲ್ಲಿ ಬ್ರಿಟಿಷರು ಈ ಇಸ್ಲಾಮಿ ಸರಕಾರವನ್ನು ಕೊನೆಗೊಳಿಸಿದರು. ಆದರೆ ಪರಾಧೀನತೆಯ ಅವಧಿಯಲ್ಲೂ ಹಾವುಸಾ ಮತ್ತು ಫುಲ್ಬೆ ಸಮುದಾಯದ ಸಂದೇಶ ಪ್ರಚಾರಾಸಕ್ತಿ ಕುಂಠಿತವಾಗಲಿಲ್ಲ. ಆದ್ದರಿಂದ ಇಪ್ಪತ್ತನೇ ಶತಮಾನದಲ್ಲಿ ಅವರು 'ಯರೋಬಾ'ದ ಮೂರ್ತಿ ಪೂಜಕ ಪ್ರದೇಶಗಳಲ್ಲಿ ಇಸ್ಲಾಮಿನ ಪರಿಚಯ ಮಾಡಿಸಿದರು. ನೈಜಿರ್ ಹೊಳೆಯ ದಕ್ಷಿಣ ಭಾಗದ ತನಕ ಅವರು ಈ ಸದ್ಧರ್ಮದ ಪ್ರಚಾರ ಮಾಡಿದರು. 'ಉಜೀಬು' ಪ್ರದೇಶದಲ್ಲಿ ಮೊಟ್ಟಮೊದಲು 1894ರಲ್ಲಿ ಅವರು ಸಂದೇಶ ಪ್ರಚಾರ ಕಾರ್ಯವನ್ನು ಆರಂಭಿಸಿದರು. ಕೆಲವೇ ವರ್ಷಗಳಲ್ಲಿ ಅವರು ಎಷ್ಟು

ಪ್ರಗತಿ ಸಾಧಿಸಿದರೆಂದರೆ 1908ರಲ್ಲಿ ಅಲ್ಲಿನ ನಗರವೊಂದರಲ್ಲೇ ಇಪ್ಪತ್ತು ಮಸೀದಿಯನ್ನು ಹಾಗೂ ಇನ್ನೊಂದು ನಗರದಲ್ಲಿ ಹನ್ನೆರಡು ಮಸೀದಿಯನ್ನು ನಿರ್ಮಿಸಿದರು. ಹಾಗೆಯೇ 1898ರಲ್ಲಿ ನೈಜಿರ್ ಹೊಳೆಯ ದಕ್ಷಿಣ ಭಾಗಕ್ಕೆ ಅವರು ಇಸ್ಲಾಮಿನ ಸಂದೇಶವನ್ನು ಕೊಂಡು ಹೋದರು. 1910ರ ವೇಳೆಗೆ ಆ ಪ್ರದೇಶದಲ್ಲಿ ಸತ್ಯದ ಕಡೆಗೆ ಓಗೊಡದ ಯಾವುದೇ ಗೋತ್ರ ಉಳಿದಿರಲಿಲ್ಲ.

ಆಫ್ರಿಕಾದ ಪಶ್ಚಿಮ ತೀರ ಮುಸ್ಲಿಮರ ಸಂದೇಶ ಪ್ರಚಾರ ಕೇಂದ್ರವಾಗಿದೆ. ಗಾನಾ, ಸಿರ್‍ರಾಲಿಯೋನ್, ಲೈಬೀರಿಯಾ ಮತ್ತು ಮೆಂಡಿ(Mendi- ಇದು ಸಿರ್‍ರಾಲಿಯೋನ್‌ನ ದಕ್ಷಿಣಕ್ಕೆ ಸುಮಾರು ನೂರು ಕಿಲೋ ಮೀಟರ್ ಅಂತರದಲ್ಲಿರುವ ಒಂದು ಪ್ರದೇಶವಾಗಿದೆ) ಮುಂತಾದ ತೀರ ಪ್ರದೇಶಗಳಲ್ಲಿ ಇಂದಿಗೆ ಸುಮಾರು ನೂರು ವರ್ಷಗಳ ಹಿಂದೆ ಮುಸ್ಲಿಮ್ ವ್ಯಾಪಾರಸ್ಥರು ಇಸ್ಲಾಮಿನ ಸಂದೇಶ ಪ್ರಚಾರ ಕೆಲಸವನ್ನು ಮಾಡಿದರು. ಕೆಲವೇ ವರ್ಷಗಳ ಅವಧಿಯಲ್ಲಿ ಅಲ್ಲಿನ ಕಿರಾತತೆಯು ಸಂಸ್ಕೃತಿ ಮತ್ತು ನಾಗರಿಕತೆಯಾಗಿ ಪರಿವರ್ತನೆಗೊಂಡಿತು. ಕ್ರಿ.ಶ. 1802ರಲ್ಲಿ ಬ್ರಿಟಿಷ್ ಕಂಪೆನಿಯೊಂದು ದಾರುಲ್ ಉಲೂಮ್‌ಗೆ ಸಲ್ಲಿಸಿದ ಅರ್ಜಿಯಲ್ಲಿ ಹೀಗೆ ಪ್ರಸ್ತಾವಿಸಿತ್ತು-

"ಇಲ್ಲಿಂದ ಸುಮಾರು 40 ಮೈಲಿಗಳ ದೂರದಲ್ಲಿ ಇಂದಿಗೆ ಸುಮಾರು ಎಪ್ಪತ್ತು ವರ್ಷಗಳ ಹಿಂದೆ ಕೆಲವು ಮುಸ್ಲಿಮ್ ವ್ಯಾಪಾರಸ್ತರು ಬಂದು ನೆಲೆಸಿದ್ದರು. ಸಾಮಾನ್ಯ ಮುಸ್ಲಿಮರಂತೆ ಅವರೂ ಇಲ್ಲಿ ವಿದ್ಯಾಸಂಸ್ಥೆಗಳನ್ನು ತೆರೆದು ಧಾರ್ಮಿಕ ಶಿಕ್ಷಣ ಕೊಡಲಾರಂಭಿಸಿದರು. ಇಸ್ಲಾಮ್ ಸ್ವೀಕರಿಸಿದವರನ್ನು ಗುಲಾಮರನ್ನಾಗಿ ಮಾಡಿ ಮಾರಲಾಗುವುದಿಲ್ಲವೆಂದು ಅವರು ತೀರ್ಮಾನಿಸಿದ್ದರು. ಕೆಲವೇ ವರ್ಷಗಳ ಅವಧಿಯಲ್ಲಿ ಇಲ್ಲಿ ಸಂಸ್ಕೃತಿ ಮತ್ತು ನಾಗರಿಕತೆಗಳ ಲಕ್ಷಣಗಳು ಗೋಚರವಾಗ ತೊಡಗಿತು. ಜನಸಂಖ್ಯೆ ವೃದ್ಧಿಯಾಯಿತು. ಸುಭಿಕ್ಷೆ ವ್ಯಾಪಕವಾಯಿತು ಮತ್ತು ಕ್ರಮೇಣ ಇಸ್ಲಾಮಿನ ಪ್ರಭಾವ ಅಲ್ಲಿ ಹರಡುತ್ತಾ ಹೋಯಿತು. ಜನರು ಗುಂಪು ಗುಂಪಾಗಿ ಮುಸ್ಲಿಮರ ಧರ್ಮ ಸ್ವೀಕರಿಸಲಾರಂಭಿಸಿದರು. ಸದ್ಯವೇ ಆ ಸಮಸ್ತ ಪ್ರದೇಶ ಇಸ್ಲಾಮಿನ ವಶವಾಗುತ್ತದೆಂದು ಭಾಸವಾಗುತ್ತದೆ."

ಸಿರಾಲಿಯೋನ್‌ನ ಜನರಲ್ಲಿ ಇಸ್ಲಾಮಿನ ಪ್ರಚಾರವಾದ ಕುರಿತು ಡಾ| ವೇಮರ್ ಹೀಗೆನ್ನುತ್ತಾರೆ,

"ಅವರಲ್ಲಿ ಧರ್ಮ ಪ್ರಚಾರ ಕಾರ್ಯ ಕೈಗೊಳ್ಳಲು ಯಾವುದೇ ನಿರ್ದಿಷ್ಟ ವರ್ಗವು ನಿಯುಕ್ತಗೊಂಡಿಲ್ಲ. ಬದಲಾಗಿ ಅವರ ಪೈಕಿಯ ಪ್ರತಿಯೊಬ್ಬನೂ ಸಂದೇಶ ಪ್ರಚಾರಕನಾಗಿದ್ದಾನೆ. ಐದಾರು ಮುಸ್ಲಿಮರು ಜಮಾಯಿಸಿದ ಕಡೆಯಲ್ಲಿ ಮಸೀದಿಯೊಂದು ನಿರ್ಮಾಣವಾಗುತ್ತದೆ. ಈ ಪುಟ್ಟ ಕಟ್ಟಡವೇ ಅಲ್ಲಿನ ಸಂದೇಶ ಪ್ರಚಾರ ಕೇಂದ್ರವಾಗಿ ಪರಿಣಮಿಸುತ್ತದೆ. ಅದರ ತತ್ವಾದರ್ಶಗಳೂ ಅತ್ಯಂತ ಸರಳವಾದುದಾಗಿದೆ. ಯಾರಾದರೂ ಸಾಕ್ಷ್ಯವಚನ (ಅಲ್ಲಾಹನಲ್ಲದೆ ಬೇರೆ ಆರಾಧ್ಯರಿಲ್ಲ, ಮುಹಮ್ಮದ್(ಸ) ಅಲ್ಲಾಹನ ಸಂದೇಶವಾಹಕರಾಗಿದ್ದಾರೆ) ಪಠಿಸಿ ನಮಾಝ್ ಮಾಡಲಾರಂಭಿಸಿದರೆ ಮದ್ಯಪಾನವನ್ನು ವರ್ಜಿಸಲು ತೀರ್ಮಾನಿಸಿದರೆ ಅವರು ವಿಶ್ವ ಭ್ರಾತೃತ್ವದ ಸದಸ್ಯರಾಗಿ ಮಾರ್ಪಡುತ್ತಾರೆ."

ಗಾನಾದಲ್ಲಿ ಇಸ್ಲಾಮಿನ ಸಕ್ರಿಯ ಸಂದೇಶ ಪ್ರಚಾರಕರು 'ಹಾವುಸಾ' ಸಮುದಾಯದ ವ್ಯಾಪಾರಿಗಳಾಗಿದ್ದಾರೆ. ಅವರ ಆಕರ್ಷಕ ಜೀವನಶೈಲಿ ಮತ್ತು ವಿಶಿಷ್ಟ ಶಿಷ್ಟಾಚಾರಗಳು ಹಿಂದುಳಿದ ಬುಡಕಟ್ಟುಗಳನ್ನು ಅವರೆಡೆಗೆ ಸೆಳೆಯುವಂತೆ ಮಾಡುತ್ತದೆ. ಅವರು ಅತ್ಯಂತ ಯಶಸ್ವಿ ರೀತಿಯಲ್ಲಿ ಅವರನ್ನು ತಮ್ಮ ಧರ್ಮದಲ್ಲಿ ಸೇರಿಸಿಕೊಳ್ಳುತ್ತಾರೆ. 'ದಾಹೋಮಿ' ಮತ್ತು 'ಇಶಾನತಿ' ಪ್ರದೇಶದಲ್ಲಿ ಆ ಜನಾಂಗದ ಮಧ್ಯೆ ಅವರು ತಮ್ಮ ಕೆಲಸವನ್ನು ಆರಂಭಿಸಿದ್ದಾರೆ. ಆದ್ದರಿಂದ ಸಮಸ್ತ ಪಶ್ಚಿಮ ಆಫ್ರಿಕಾದಲ್ಲಿ ಈ ಎರಡು ಪ್ರದೇಶಗಳಲ್ಲಿ ಮಾತ್ರವೇ ಸ್ವಲ್ಪ ಮಟ್ಟಿಗೆ ಮೂರ್ತಿ ಪೂಜೆಯ ಛಾಯೆ ಕಂಡು ಬರುತ್ತದೆ. ಲಾಗೋಸ್ ಪ್ರದೇಶದಲ್ಲಿ ಮುಸ್ಲಿಮರು ಬಹಳ ಪ್ರಬಲರಾಗಿದ್ದಾರೆ. ಅಲ್ಲಿ ಅವರ ಜನಸಂಖ್ಯೆ ಸುಮಾರು ಹದಿನೈದು ಸಾವಿರದಷ್ಟಿದೆ. ಅವರಲ್ಲಿ ಪುಲ್ಬೆ, ಹಾವುಸಾ ಮತ್ತು ಮಾಂಡ್‌ನಗೂ ಎಂಬ ಮೂರು ಜನಾಂಗಕ್ಕೆ ಸೇರಿದ ಜನರಿದ್ದಾರೆ. ತಮ್ಮ ವ್ಯಾಪಾರಕ್ಕಾಗಿ ಅವರು ದೂರ ದೂರದ ಪ್ರದೇಶಗಳಿಗೆ ಪ್ರವಾಸ ಕೈಗೊಳ್ಳುತ್ತಾರೆ. ಆದ್ದರಿಂದ ಅವರಿಂದಾಗಿ ಸಮಸ್ತ ನೈಜೀರಿಯಾದ ತೀರ ಪ್ರದೇಶ ಮತ್ತು ಗೋಲ್ಡ್‌ಕೋಸ್ಟ್ ಇಸ್ಲಾಮಿನ ಬೆಳಕಿನಿಂದ ಪ್ರಕಾಶಿತಗೊಳ್ಳುತ್ತಿದೆ. ಸೆನೆಗಾಲ್‌ನ ಅಂಚಿನಿಂದ ಲಾಗೋಸ್‌ನ ತನಕದ ಎರಡು ಸಾವಿರ ಕಿಲೋ ಮೀಟರ್ ಅಂತರದ ತೀರ ಪ್ರದೇಶದಲ್ಲಿ ಯಾವ ಜನವಾಸ ಪ್ರದೇಶವೂ ಕನಿಷ್ಠ ಪಕ್ಷ ಒಂದು ಮಸೀದಿ ಮತ್ತು ಓರ್ವ ಮೌಲವಿಯ ಅಸ್ತಿತ್ವದಿಂದ ಮುಕ್ತವಾಗಿಲ್ಲ. ಪ್ರತಿಯೊಬ್ಬ ಮುಸಲ್ಮಾನ ಅವನು ವ್ಯಾಪಾರಿಯಾಗಿರಲಿ ಅಥವಾ ಬ್ರಿಟಿಷ್, ಫ್ರಾನ್ಸ್ ಮತ್ತು ಬೆಲ್ಜಿಯಮ್‌ನ ಜನಸೇವಕನಾಗಿರಲಿ, ಅವನ ಮೊದಲ ಕರ್ತವ್ಯ ಯಾವುದೇ ಸತ್ಯನಿಷೇಧಿ ಅಥವಾ ಮೂರ್ತಿಪೂಜಕನನ್ನು ಕಂಡಾಗ ಅವನಿಗೆ ಕುರ್‌ಆನ್‌ನ ಬೋಧನೆ ಕೊಡುವುದಾಗಿದೆ. ಈ ಅಪ್ರತಿಮ ಸಂದೇಶ ಪ್ರಚಾರಾಸಕ್ತಿಯು ಕ್ರೈಸ್ತ ಮಿಶನರಿಗಳ ನಿರೀಕ್ಷೆಗಳನ್ನು ಮಣ್ಣು ಮುಕ್ಕಿಸಿತು.

ಪಶ್ಚಿಮ ಆಫ್ರಿಕಾದಲ್ಲೂ ಅರಬ್ ವ್ಯಾಪಾರಸ್ಥರ ಮೂಲಕವೇ ಇಸ್ಲಾಮಿನ ಪ್ರವೇಶವಾಯಿತು. ಇಪ್ಪತ್ತನೇ ಶತಮಾನದ ವೇಳೆಗಾಗಲೇ ಅವರು ಸಮಸ್ತ ಝುಂಜ್ ತೀರಪ್ರದೇಶಕ್ಕೆ ಇಸ್ಲಾಮಿನ ಪರಿಚಯ ಮಾಡಿಸಿದ್ದರು. ಅಲ್ಲಿ ಅನೇಕ ಕಡೆಗಳಲ್ಲಿ ಇಸ್ಲಾಮೀ ಜನವಾಸ ಪ್ರದೇಶಗಳು ಸ್ಥಾಪನೆಗೊಂಡಿದ್ದವು. ಆದರೆ ಜರ್ಮನಿ, ಇಟಲಿ ಮತ್ತು ಇಂಗ್ಲೆಂಡ್ ಮುಂತಾದ ರಾಷ್ಟ್ರಗಳು ಅಲ್ಲಿ ತಮ್ಮ ವಸಾಹತುಗಳನ್ನು ಸ್ಥಾಪಿಸಲಾರಂಭಿಸಿದಾಗ ಸಂದೇಶ ಪ್ರಚಾರದ ನೈಜ ಕೆಲಸ ಆರಂಭಗೊಂಡಿತು. ವಸಾಹತುಗಳ ಸ್ಥಾಪನೆಯಿಂದಾಗಿ ರಾಷ್ಟ್ರದ ಒಳ ಪ್ರದೇಶಗಳಿಗೆ ದಾರಿ ಸುಗಮವಾಯಿತು. ಅಲ್ಲಿ ಸರಕಾರದ ವ್ಯವಸ್ಥೆಯನ್ನು ಸ್ಥಾಪಿಸಲು ಆ ಸಾಮ್ರಾಜ್ಯಗಳಿಗೆ ಮುಸ್ಲಿಮರ ಹೊರತು ಬೇರಾವುದೇ ಸಮೂಹದ ನೆರವು ದೊರೆಯಲಿಲ್ಲ. ಆದ್ದರಿಂದ ಸೇನೆ, ಆರಕ್ಷಕ ಪಡೆ, ನ್ಯಾಯಾಲಯ, ವಿದ್ಯಾಸಂಸ್ಥೆ, ಭೂಕಂದಾಯ ಮುಂತಾದ ಎಲ್ಲಾ ವಿಭಾಗಗಳಲ್ಲಿ ಮುಸ್ಲಿಮರನ್ನು ನೇಮಿಸಲಾಯಿತು. ಅವರು ಆಫ್ರಿಕಾದ ಒಳಪ್ರದೇಶಗಳಲ್ಲಿ ಅತ್ಯಂತ ಸಕ್ರಿಯವಾಗಿ ಇಸ್ಲಾಮಿನ ಪ್ರಚಾರಕಾರ್ಯ ಕೈಗೊಂಡರು. ಇಪ್ಪತ್ತನೇ ಶತಮಾನದ ಆರಂಭದಲ್ಲಿ ಅವರು 'ಬೋಂದಯಿ' ಮತ್ತು 'ವಾದೇಗೋ' ಜನಾಂಗಗಳನ್ನು ಬಹುತೇಕ ಮುಸ್ಲಿಮರನ್ನಾಗಿ ಮಾಡಿದರು. ಕ್ರಿ.ಶ. 1905ರ ವೇಳೆಗೆ ಅವರು ಪಶ್ಚಿಮದ 'ಟಾಂಗಾನಿಗಾ', ಉತ್ತರದ

ಓಸುಂಬಾರಾ ಮತ್ತು ದಕ್ಷಿಣದ ನ್ಯಾಸಾದ ತನಕ ಪವಿತ್ರ ಕುರ್‌ಆನಿನ ಬೋಧನೆಗಳೊಂದಿಗೆ ಹರಡಿದರು. ಕ್ರಿ.ಶ. 1891ರಲ್ಲಿ 'ಓಸುಂಬಾರಾ'ದಲ್ಲಿ ಮುಸ್ಲಿಮರ ಅಸ್ತಿತ್ವವಿರಲಿಲ್ಲ ಮಾತ್ರವಲ್ಲ ಅಲ್ಲಿ ಮುಸ್ಲಿಮರನ್ನು ದ್ವೇಷಿಸಲಾಗುತ್ತಿತ್ತು. ಆದರೆ ಅಲ್ಲಿ ವಿಧ್ಯುಕ್ತ ಸರಕಾರ ಸ್ಥಾಪನೆಗೊಂಡು ಮುಸ್ಲಿಮ್ ಅಧಿಕಾರಿಗಳು ಅಲ್ಲಿಗೆ ತಲಪಿದಾಗ, ಸರಕಾರಿ ಅಧಿಕಾರಿಗಳೊಂದಿಗೆ ಯಾವುದಾದರೂ ರೀತಿಯ ಸಂಬಂಧ ಇರುವವರೆಲ್ಲರೂ ಮುಸ್ಲಿಮರಾಗಿ ಮಾರ್ಪಟ್ಟರು. ಹಾಗೆಯೇ ಮುಸ್ಲಿಮ್ ಶಿಕ್ಷಕರು ನಿಯುಕ್ತರಾಗಿದ್ದ ಹೆಚ್ಚಿನೆಲ್ಲಾ ಶಿಕ್ಷಣ ಕೇಂದ್ರಗಳಲ್ಲಿ ಇಸ್ಲಾಮ್ ವ್ಯಾಪಕವಾಗಿ ಹರಡಿತು. ಹಾಗೆಯೇ ನ್ಯಾಸಾಲೇಂಡ್‌ನಲ್ಲೂ ಹತ್ತು ವರ್ಷಗಳೊಳಗಾಗಿ ಇಸ್ಲಾಮ್ ಆಶ್ಚರ್ಯಕರ ರೀತಿಯಲ್ಲಿ ಪ್ರಗತಿ ಸಾಧಿಸಿತು. ಅಲ್ಲಿ ಇಸ್ಲಾಮ್ ಸ್ವೀಕರಿಸುವುದೆಂದರೆ ಮಾನವತೆಯೆಡೆಗೆ ಮರಳುವುದಕ್ಕೆ ಸಮಾನವೆಂದು ಕ್ರೈಸ್ತ ಧರ್ಮ ಪ್ರಚಾರಕರೂ ಸಮ್ಮತಿಸುತ್ತಾರೆ.

ಕೇಪ್ ಕಾಲೋನಿಯಲ್ಲಿ ಮಲಾಯಾ ದ್ವೀಪದ ವ್ಯಾಪಾರಿಗಳು ಇಸ್ಲಾಮಿನ ಪ್ರಚಾರಗೈದರು. ಅವರು ಹಾಲೆಂಡ್ ಸರಕಾರದ ಆಶ್ರಯದಲ್ಲಿದ್ದುದರಿಂದ ಬಹಳ ಕಾಲದಿಂದ ಅಲ್ಲಿ ನೆಲೆಸಿದ್ದರು. ಜತೆಗೆ ಅತ್ಯಂತ ಶಾಂತವಾಗಿ ಧರ್ಮ ಪ್ರಚಾರ ಕಾರ್ಯ ನಡೆಸುತ್ತಿದ್ದರು. ಕ್ರಿ.ಶ. 1809ರಲ್ಲಿ 'ಕೊಲ್ಬಾವಿಕ್' ಎಂಬ ಕ್ರೈಸ್ತ ಮಿಶನರಿಯೊಬ್ಬ ಹೀಗೆ ಬರೆಯುತ್ತಾನೆ-

"ನಮ್ಮ ಧರ್ಮ ಪ್ರಚಾರಕರ ಪ್ರಯತ್ನಗಳ ಹೊರತಾಗಿಯೂ ಮುಸ್ಲಿಮ್ ಪ್ರಚಾರಕರು ಕರಿಯ ಗುಲಾಮರನ್ನು ಮತ್ತು ಸ್ವತಂತ್ರ ವ್ಯಕ್ತಿಗಳನ್ನು ಮುಸ್ಲಿಮರನ್ನಾಗಿ ಮಾಡುವಲ್ಲಿ ಯಶಸ್ಸು ಸಾಧಿಸುತ್ತಾರೆ. ನಮ್ಮ ಮಿಶನರಿಗಳು ಬಹಳ ಸಮಯ ಮತ್ತು ಹೇರಳ ಮೊತ್ತವನ್ನು ವಿನಿಯೋಗಿಸಿಯೂ ಬಹಳ ಕಷ್ಟದಿಂದ ಕೆಲವರನ್ನು ಕ್ರೈಸ್ತರನ್ನಾಗಿ ಮಾಡುವಲ್ಲಿ ಸಫಲರಾಗುತ್ತಾರೆ. ಆದರೆ ಮುಸ್ಲಿಮ್ ಪ್ರಚಾರಕರು ಯಾವುದೇ ಶ್ರಮವಿಲ್ಲದೆ ದೊಡ್ಡ ಜನಸಮೂಹವನ್ನು ಒಟ್ಟು ಸೇರಿಸುವಲ್ಲಿ ಯಶಸ್ವಿಯಾಗುತ್ತಾರೆ."

ಕಳೆದ ಐವತ್ತು ವರ್ಷಗಳಿಂದ ಹೊರಗಿನಿಂದಲೂ ಅನೇಕ ಮುಸ್ಲಿಮರು ಇಲ್ಲಿಗಾಗಮಿಸಿದ್ದಾರೆ. ಅವರ ಆಗಮನದಿಂದ ಸಂದೇಶ ಪ್ರಚಾರ ಕಾರ್ಯಕ್ಕೆ ಹೊಸ ಸ್ಫೂರ್ತಿ ದೊರೆತಂತಾಗಿದೆ. ಇದೀಗ 'ಕ್ಲೇರಾಮೌಂಟ್' ಪ್ರದೇಶದಲ್ಲಿ ಸಂದೇಶ ಪ್ರಚಾರ ಪ್ರಗತಿಯಲ್ಲಿದೆ. ಅಲ್ಲಿ ಅನಾಥ ಮತ್ತು ನಿರಾಶ್ರಿತ ಮಕ್ಕಳು ಹೆಚ್ಚು ಸಂಖ್ಯೆಯಲ್ಲಿ ಇಸ್ಲಾಮ್ ಸ್ವೀಕರಿಸುತ್ತಾರೆ.

.....................

ಅಧ್ಯಾಯ:5

# ಚೀನಾದಲ್ಲಿ ಇಸ್ಲಾಮಿನ ಪ್ರಚಾರ

ಆಫ್ರಿಕಾದ ನಂತರ ಮುಸ್ಲಿಮರ ಸಂದೇಶ ಪ್ರಚಾರದ ವಿಜಯಿಗಳ ಮತ್ತೊಂದು ದೇಶ ಪೂರ್ವಾಂಚಲ ಪ್ರದೇಶಗಳಾಗಿವೆ. ಇಲ್ಲೂ ವ್ಯಾಪಾರಿಗಳು ಸೈನಿಕರು ಮತ್ತು ಮಾನ್ಯ ವ್ಯವಹಾರಗಳನ್ನು ನಡೆಸುವ ಮುಸ್ಲಿಮರು ತಮ್ಮ ಸ್ವಾಭಾವಿಕ ಸಂದೇಶ ಚಾರಾಸಕ್ತಿಯಿಂದಾಗಿ ಇಸ್ಲಾಮಿನ ಪ್ರಚಾರ ಮಾಡಿದರು. ಸಂಪತ್ತು ಮತ್ತು ಸರಕಾರದ ನೆರವು ವರಿಗೆ ಲಭ್ಯವಿರಲಿಲ್ಲ. ಅನೇಕ ಸಂದರ್ಭಗಳಲ್ಲಿ ಅವರು ಶೋಷಿತರ ಸ್ಥಾನದಲ್ಲಿ ನಿಂತು ತ್ರುಗಳ ಖಡ್ಗಗಳನ್ನು ಎದುರಿಸಬೇಕಾಗಿತ್ತು. ಅದರ ಹೊರತಾಗಿಯೂ ಧರ್ಮದ ಪ್ರಚಾರದಲ್ಲಿ ವರು ಅತ್ಯಂತ ಪ್ರಬಲ ವಿಜಯಸಾಧಿಸಿದರು. ಆದ್ದರಿಂದಲೇ ಚೀನಾ ಮತ್ತು ಮಲಾಯಾ ೀಪಗಳಲ್ಲಿ ಅವರ ಒಟ್ಟು ಜನಸಂಖ್ಯೆ ದಶಕೋಟಿಗಿಂತಲೂ ಬಹಳ ಹೆಚ್ಚಿದೆ.

ಚೀನಾದಲ್ಲಿ ಇಸ್ಲಾಮಿನ ಆರಂಭ ಬನೂ ಉಮಯ್ಯಾರ ಆಡಳಿತ ಕಾಲದಿಂದ ಗುತ್ತದೆ. ನಾಲ್ವರು ಖಲೀಫಾಗಳ ಅನುಗ್ರಹಪ್ರದ ಆಡಳಿತ ಕಾಲದಲ್ಲೇ ಅರಬ್ ್ಯಪಾರಿಗಳು ಅರಬಿ ಸಮುದ್ರದಿಂದ ಹಿಡಿದು ಶಾಂತ ಸಾಗರದ ತನಕ ಎಲ್ಲಾ ಸಾಗರಗಳನ್ನು ೀದಿಸಿದ್ದರು. ಅವರು ಚೀನಾದ ತೀರ ಪ್ರದೇಶಗಳಿಗೂ ಇಸ್ಲಾಮ್ ಧರ್ಮವನ್ನು ಂಡೊಯ್ದಿದ್ದರು. ಆದರೆ ಬನೂ ಉಮಯ್ಯಾರ ಕಾಲದಲ್ಲಿ ಚೀನಾದೊಂದಿಗೆ ರಾಯಭಾರ ಂಬಂಧ ಸ್ಥಾಪನೆಗೊಂಡಾಗ ಹಳದಿ ಸಮುದಾಯಕ್ಕೆ ಇಸ್ಲಾಮಿನ ವಿಧ್ಯುಕ್ತ ಪರಿಚಯವಾಯಿತು. ನಂತರ ರಾಜ ಸುಆನ್ ಸೂಂಗ್ (Hsuan T Sung)ನನ್ನು ಆಕ್ರಮಣಕಾರಿಯೊಬ್ಬ ದಚ್ಯುತಿಗೊಳಿಸಿದಾಗ ಅವನ ಪುತ್ರ ಖಲೀಫಾ ಮನ್ಸೂರ್ ಅಬ್ಬಾಸಿಯೊಂದಿಗೆ ನೆರವು ೀರಿದನು. ಖಲೀಫಾ ಮನ್ಸೂರ್ ನಾಲ್ಕು ಸಾವಿರ ಸೈನಿಕರನ್ನು ಅವರ ನೆರವಿಗೆ ಕಳುಹಿಸಿದರು. ವರ ಬೆಂಬಲದಿಂದ ಸಿಂಹಾಸನ ಮತ್ತೊಮ್ಮೆ ಅವನ ವಶವಾಯಿತು. ಈ ಸೈನಿಕರು ಸ್ಲಾಮಿನ ನೈಜ ಪ್ರಚಾರಕರಾಗಿದ್ದರು. ಅವರು ತಮ್ಮ ಸ್ವದೇಶಕ್ಕೆ ಮರಳುವ ಬದಲು ೀನಾವನ್ನೇ ತಮ್ಮ ನೆಲೆವೀಡನ್ನಾಗಿ ಮಾಡಿಕೊಂಡರು. ಅಲ್ಲೇ ಅವರು ವಿವಾಹಿತರಾಗಿ ೀನಾದ ಜನಸಂಖ್ಯೆಯ ನಡುವೆ ಇಸ್ಲಾಮಿನ ಪ್ರಚಾರದ ಹೊಸ ಸರಣಿಯನ್ನೇ ಆರಂಭಿಸಿದರು. ೦ವೇ ದಶಕಗಳಲ್ಲಿ ಕೇಂಟನ್‌ನ ಸಮಸ್ತ ಪ್ರದೇಶ ಇಸ್ಲಾಮಿನ ಬೆಳಕಿನಿಂದ ಪ್ರಜ್ವಲಿಸಿತು.

## ಂತ ಹಂತವಾಗಿ ಇಸ್ಲಾಮಿನ ಪ್ರಚಾರ

ಈ ಘಟನೆಯ ಆರು ನೂರು ವರ್ಷಗಳ ನಂತರ ಮತ್ತೊಮ್ಮೆ ಮುಸ್ಲಿಮರು ಚೀನಾ ವೇಶ ಮಾಡಿ ರಾಷ್ಟ್ರದಾದ್ಯಂತ ಹರಡಿದರು. ಹೀಗೆ ಬಂದವರ ಪೈಕಿ ಅರಬ್, ಇರಾನಿ ುತ್ತು ತುರ್ಕಿ ವಲಸಿಗರಿದ್ದರು. ಹಿಜರಿಶಕೆ ಏಳನೇ ಶತಮಾನದಲ್ಲಿ ಮಂಗೋಲಿಯನ್ನರ ುಹಾಪೂರದಿಂದ ಕೊಚ್ಚಿಹೋದ ಅವರು ಇಲ್ಲಿಗೆ ಬಂದು ಸೇರಿದ್ದರು. ಈ ಜನರಿಂದಾಗಿ

ಸುಮಾರು ನೂರು-ನೂರೈವತ್ತು ವರ್ಷಗಳೊಳಗೆ ಚೀನಾದ ಸುತ್ತಮುತ್ತಲಿನ ಪ್ರದೇಶಗಳ
ಇಸ್ಲಾಮ್ ಹರಡಿತು. ವಿಶೇಷವಾಗಿ ಉತ್ತರ ಮತ್ತು ಪಶ್ಚಿಮ ಚೀನಾದ ಸಮಸ್ತ ಪ್ರದೇ
ಇಸ್ಲಾಮಿನ ವಶವಾಯಿತು. ಮಾರ್ಕೋಪೋಲೋನ ಪ್ರಕಾರ ಹದಿಮೂರನೇ ಶತಮಾನದ
ಯುನ್ನಾನ್ (Yunnan) ರಾಜ್ಯ ಬಹುತೇಕ ಇಸ್ಲಾಮಿನ ವಶವಾಯಿತು. ಹದಿನಾಲ್ಕನ
ಶತಮಾನದ ಮತ್ತೋರ್ವ ಇತಿಹಾಸಜ್ಞನ ಪ್ರಕಾರ 'ತಾಲೀಪೋ' ಪ್ರದೇಶದ ಸಮಸ್ತ ಜನಸಂಖ
ಮುಸ್ಲಿಮರದ್ದಾಗಿದೆ. ದಕ್ಷಿಣ ಚೀನಾದ ಕುರಿತು ಇಬ್ನ್ ಬತೂತಾ ಹೀಗೆನ್ನುತ್ತಾರೆ, "ಎಲ
ನಗರಗಳಲ್ಲಿ ಮುಸ್ಲಿಮರಿಗೆ ಸೇರಿದ ಸಮಸ್ತ ಕೇರಿಗಳೇ ಇವೆ. ತಮ್ಮ ಸ್ವಚ್ಛತೆ ಮತ
ಸಂಸ್ಕೃತಿಯಿಂದಾಗಿ ಅವರು ಇತರರಿಗಿಂತ ಭಿನ್ನರಾಗಿದ್ದಾರೆ. ಮುಸ್ಲಿಮರು ಚೀನಾದ ಮಹಿಳೆಯರನ
ವಿವಾಹವಾಗುತ್ತಾರೆ ಮತ್ತು ಸಾಮಾನ್ಯ ಚೀನಿಯರೊಂದಿಗೆ ಆಳ ಸಂಬಂಧ ಹೊಂದಿದ್ದಾರ
ಅದರಿಂದಾಗಿ ಇಸ್ಲಾಮ್ ಅಲ್ಲಿ ತೀವ್ರಗತಿಯಲ್ಲಿ ಬೆಳೆಯುತ್ತಿದೆ."

ಹದಿನೈದನೇ ಶತಮಾನದ ಮುಸ್ಲಿಮ್ ವ್ಯಾಪಾರಿಯಾದ ಅಲಿ ಅಕ್ಬರ್‌ರ ಪ್ರಕಾ
ಪೀಕಿಂಗ್‌ನಲ್ಲಿ ಸುಮಾರು ಮೂವತ್ತು ಸಾವಿರ ಮುಸ್ಲಿಮ್ ಕುಟುಂಬಗಳು ವಾಸವಾಗಿದ
ಹದಿನೇಳನೇ ಶತಮಾನದ ಆರಂಭದಲ್ಲಿ ಚೀನಾದ ಯಹೂದ್ಯರ ದೊಡ್ಡ ಸಮೂಹವೊಂದ
ಇಸ್ಲಾಮ್ ಸ್ವೀಕರಿಸಿತು. ಹದಿನೆಂಟನೆಯ ಶತಮಾನದಲ್ಲಿ ಕೇನ್‌ಲುಂಗ್ ಎಂಬ ವ್ಯಕ
ಝುಂಗಾರಿಯನ ದಂಗೆಯನ್ನು ಉಲ್ಲಂಘಿಸಿ ಹತ್ತು ಸಾವಿರ ಕುಟುಂಬಗಳೊಂದಿಗೆ ಹೋ
ಅಲ್ಲಿ ನೆಲೆಸಿದನು. ಸುತ್ತಮುತ್ತಲಿನ ಮುಸ್ಲಿಮ್ ಜನಸಂಖ್ಯೆಯಿಂದ ಪ್ರಭಾವಿತರಾ
ಅವರೆಲ್ಲರೂ ಇಸ್ಲಾಮ್ ಸ್ವೀಕರಿಸಿದರು. ಶ್ಯಾನ್‌ಟಾಂಗ್ (Chantong)ನಲ್ಲಿ ಬರಬಂದಾ
ಮುಸ್ಲಿಮರು ಸುಮಾರು ಹತ್ತು ಸಾವಿರ ಮಕ್ಕಳಿಗೆ ಆಶ್ರಯ ನೀಡಿದರು ಮತ್ತು ಅವರೆಲ್ಲರನ್ನೂ
ಮುಸ್ಲಿಮರನ್ನಾಗಿ ಮಾಡಿದರು. ಮತ್ತೊಂದು ಬರದ ಸಂದರ್ಭದಲ್ಲಿ ಕ್ವಾನ್‌ಟಂಗ್ (Kwa
Tung)ನ ಹತ್ತು ಸಾವಿರ ಮಕ್ಕಳನ್ನು ಮುಸ್ಲಿಮರು ಇಸ್ಲಾಮಿ ತರಬೇತಿ ನೀಡಿ ಬೆಳೆಸಿದರು
ಹೀಗೆ ಅಸಾಮಾನ್ಯ ಪರಿಸ್ಥಿತಿಗಳಲ್ಲಿ ಮಾತ್ರವಲ್ಲದೆ ಸಾಮಾನ್ಯ ಪರಿಸ್ಥಿತಿಯಲ್ಲೂ ಮುಸ್ಲಿಮರ
ಇಸ್ಲಾಮಿನ ಪ್ರಚಾರ ಮಾಡುತ್ತಾರೆ. ಸೈಯದ್ ಸುಲೈಮಾನ್ ಎಂಬ ಚೀನಿ ಮುಸ್ಲಿಮರೊಬ್ಬ
ಪ್ರಕಾರ ಪ್ರತಿವರ್ಷ ಇಸ್ಲಾಮ್ ಸ್ವೀಕರಿಸುವವರ ಸಂಖ್ಯೆಯನ್ನು ಅಂದಾಜಿಸುವುದು ಬಹ
ಕಷ್ಟಸಾಧ್ಯ.

ಇಂದಿನ ಕಾಲದಲ್ಲಿ ಚೀನಾದ ಮುಸ್ಲಿಮರಲ್ಲಿ ಇಸ್ಲಾಮಿನ ಪ್ರಚಾರದ ಅಮಿತಾಸಕ
ಕಂಡು ಬರುತ್ತದೆ. ವ್ಯಾಪಾರಿಗಳು, ಉದ್ಯಮಿಗಳು ಮಾತ್ರವಲ್ಲ ಸರಕಾರಿ ಸಂಸ್ಥೆಗಳಲ್ಲಿ ಕೆಲಸ
ಮಾಡುವ ಮುಸ್ಲಿಮ್ ನೌಕರರೂ ತಮ್ಮ ಸಂಪರ್ಕ ವಲಯದಲ್ಲಿ ವಿಶೇಷವಾಗಿ ಸಂದೇಶ
ಪ್ರಚಾರ ಕಾರ್ಯವನ್ನು ಕೈಗೊಳ್ಳುತ್ತಾರೆ. ಚೀನೀ ಸೇನೆಯ ಮುಸ್ಲಿಮ್ ಅಧಿಕಾರಿಗಳೂ ತಮ್ಮ
ಕರ್ತವ್ಯದ ಬಗ್ಗೆ ಅಶ್ರದ್ಧರಾಗಿಲ್ಲ. ಚೀನಾದ ಮುಸ್ಲಿಮರೂ ಇಸ್ಲಾಮಿನ ಪ್ರಚಾರದ
ಮಹತ್ವವನ್ನು ಚೆನ್ನಾಗಿ ಮನಗಂಡಿದ್ದಾರೆ. ಆದ್ದರಿಂದ ಮೊದಲು ಕಾನ್ಸೂವಿನಲ್ಲಿ ಸಂದೇಶ
ಪ್ರಚಾರಕ್ಕಾಗಿ ಶಿಕ್ಷಣ ಸಂಸ್ಥೆಯೊಂದನ್ನು ಸ್ಥಾಪಿಸಲಾಯಿತು. ಈಗ ಸುಮಾರು ಹತ್ತು
ರಾಜ್ಯಗಳಲ್ಲಿ ಇಂತಹುದೇ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಲಾಗಿದೆ. ಚೀನಾದಲ್ಲಿ ಹೊರಗಿನಿಂದ

ಬಂದ ಮುಸ್ಲಿಮರು ಹೆಚ್ಚೆಂದರೆ ಒಂದು ಲಕ್ಷದಷ್ಟಿರಬಹುದು. ಆದರೆ ಅವರಲ್ಲಿರುವ ವಿಶ್ವವ್ಯಾಪಿ ಸಂದೇಶ ಪ್ರಚಾರಾಸಕ್ತಿಯಿಂದಾಗಿ ಇಂದು ಚೀನಾದಲ್ಲಿ ಕೋಟಿಗಟ್ಟಲೆ ಮುಸ್ಲಿಮ್ ಜನಸಂಖ್ಯೆಯಿದೆ. ಆದ್ದರಿಂದಲೇ ರಷ್ಯನ್ ವಿಮರ್ಶಕನೊಬ್ಬ ಹೀಗೆಂದಿದ್ದಾನೆ, "ಇಸ್ಲಾಮಿನ ಪ್ರಚಾರ ಇದೇ ಗತಿಯಲ್ಲಿ ಮುಂದುವರಿಯುತ್ತಲಿದ್ದರೆ ಮುಸ್ಲಿಮ್ ರಾಜಕೀಯ ಪೂರ್ವಾಂಚಲದ ಭೂಗೋಳವನ್ನೇ ಬದಲಿಸಿ ಬಿಟ್ಟರೂ ಅಚ್ಚರಿಯಿಲ್ಲ"*

....................

* ಕಮ್ಯೂನಿಸ್ಟ್ ಮಹಾಪೂರದ ಬಳಿಕ ಚೀನಾದ ಮುಸ್ಲಿಮರ ಮೇಲೆ ಅನೇಕ ರೀತಿಯ ಸಂಕಷ್ಟಗಳು ಎರಗಿದವು. ಗತಕಾಲದ ಮತ್ತು ವರ್ತಮಾನದ ವಿದ್ಯಮಾನಗಳನ್ನು ತಾಳೆ ಹಾಕಿದಾಗ ಈ ವಾಸ್ತವಿಕತೆ ಸ್ಫುಟವಾಗಿ ನಮ್ಮ ಮುಂದೆ ಬರುತ್ತದೆ. ಕಮ್ಯುನಿಸ್ಟ್ ಕ್ರಾಂತಿಯ ವೇಳೆ ಚೀನಾದಲ್ಲಿ ಮುಸ್ಲಿಮರ ಜನಸಂಖ್ಯೆ ಐದು ಕೋಟಿಗಿಂತಲೂ ಹೆಚ್ಚಿತ್ತು. 1961ರ ಸರಕಾರಿ ಜನಗಣತಿಯ ಪ್ರಕಾರ ಈ ಸಂಖ್ಯೆ ಕುಂಠಿತವಾಗಿ ಒಂದು ಕೋಟಿಗೆ ತಲಪಿತು. "ಅಂತರ್ ದೃಷ್ಟಿಯುಳ್ಳವರಿಗೆ ಇದರಲ್ಲಿ ಪಾಠವಿದೆ." (ಕುರ್‌ಆನ್)

ಅಧ್ಯಾಯ: 6

# ಮಲಾಯಾ ದ್ವೀಪದಲ್ಲಿ ಇಸ್ಲಾಮಿನ ಪ್ರಚಾರ

**ಮ**ಲಾಯಾ ದ್ವೀಪದಲ್ಲಿ[1] ಇಸ್ಲಾಮಿನ ಪ್ರಚಾರಕರು ಭಾರತ ಮತ್ತು ಅರೇಬಿಯಾ
ವ್ಯಾಪಾರಿಗಳಾಗಿದ್ದರು. ಪೋರ್ಚುಗೀಸರು ಸಮುದ್ರ ಮಾರ್ಗವಾಗಿ ಸಾಮ್ರಾಜ್ಯ ವಿಸ್ತರಣೆಯ
ಆರಂಭಿಸುವುದಕ್ಕೆ ಮೊದಲು ಅರಬ್ ಮತ್ತು ಭಾರತದ ವ್ಯಾಪಾರಿಗಳು ಚೀನಾ ಮತ್ತು ಪೂ
ಭಾರತದ ಸಮಸ್ತ ದ್ವೀಪಗಳಲ್ಲಿನ ವ್ಯಾಪಾರವನ್ನು ತಮ್ಮ ವಶವಿರಿಸಿಕೊಂಡಿದ್ದರು. ಅವ
ಪೋರ್ಚುಗೀಸ್ ಮತ್ತು ಸ್ಪೇನ್‌ನವರಂತೆ ವಿಜಯಿಗಳಾಗಿ ಬಂದಿರಲಿಲ್ಲ. ಖಡ್ಗದ ಮೂ
ಅವರು ತಮ್ಮ ಧರ್ಮದ ಪ್ರಚಾರ ಮಾಡಬಯಸಿರಲಿಲ್ಲ. ತಾವು ಪ್ರಬಲರಾಗುಳಿಯ
ಬೇಕಾದಂತಹ ಯಾವ ಶಕ್ತಿಯೂ ಅವರ ಬಳಿಯಿರಲಿಲ್ಲ. ಅವರು ಕೇವಲ ಸತ್ಯವಿಶ್ವಾ
ಶಕ್ತಿಯನ್ನು ಹೊಂದಿದ್ದರು. ಸತ್ಯಸಂಧತೆಯ ಸೊತ್ತನ್ನು ಮಾತ್ರವೇ ಅವರು ತಮ್ಮ
ಕೊಂಡು ಬಂದಿದ್ದರು. ಈ ಅಸ್ತ್ರಗಳ ಮೂಲಕವೇ ಅವರು ಮಲಾಯಾ ದ್ವೀಪವ
ಜಯಿಸಿದರು. ಅದರ ಶಕ್ತಿಯ ಮೂಲಕವೇ ಅವರು ಸರಕಾರದ ಮೇಲೆ ಪ್ರಭಾವ ಬೀರಿದ
ಅದರ ಮೂಲಕವೇ ಆರು ನೂರು ವರ್ಷಗಳೊಳಗಾಗಿ ಆ ದ್ವೀಪಗಳ ಐದು ಕೊ
ಜನಸಂಖ್ಯೆಯಲ್ಲಿ ನಾಲ್ಕು ಕೋಟಿಯಷ್ಟು ಜನರು ಇಸ್ಲಾಮ್ ಸ್ವೀಕರಿಸಲು ಸಾಧ್ಯವಾಯಿ
ಪುರಾತನ ಮೂರ್ತಿ ಪೂಜೆಯಿಂದ ಕೂಡಿದ ಮೂಢನಂಬಿಕೆಗಳು ಅವರ ಪ್ರತಿಯೊಂ
ಹೆಜ್ಜೆಗೂ ತಡೆಯೊಡ್ಡಿತು. ಪೋರ್ಚುಗೀಸ್ ಮತ್ತು ಸ್ಪೇನ್‌ನ ಜನರ ಸಾಮ್ರಾಜ್ಯಶಾಹಿ
ಹಲವೊಮ್ಮೆ ಅವರ ಮುಂದೆ ಕತ್ತಿ ಮಸೆಯುತ್ತಾ ಎದುರಾಯಿತು. ಹಾಲೆಂಡ್‌ನ ಕ್ರೈ
ಶಕ್ತಿಗಳು ಅವರ ಧೈರ್ಯ ಉಡುಗಿಸುವ ಶತಪ್ರಯತ್ನ ನಡೆಸಿದವು. ಆದರೆ ಅದಾವುದೂ ಅ
ಧರ್ಮ ಸೇವಾಸಕ್ತಿಯನ್ನು ಕುಂದಿಸುವಲ್ಲಿ ಸಫಲವಾಗಲಿಲ್ಲ. ಅವರು ತಮ್ಮೆಲ್ಲಾ ಬುದ್ಧಿಮ
ಹೋರಾಟ, ದೃಢಚಿತ್ತತೆ ಮತ್ತು ಸಂಪತ್ತನ್ನು ತಮ್ಮ ಐಷಾರಾಮಕ್ಕಾಗಿ ವಿನಿಯೋಗಿಸದೆ ತ
ಧರ್ಮದ ಸೇವೆಗಾಗಿ ವಿನಿಯೋಗಿಸಿದರು. ಅವರ ಪ್ರಯತ್ನಗಳಿಂದಾಗಿ ಆರು ನೂ

---

1. ಮಲಾಯಾ ದ್ವೀಪವೆಂದರೆ, ಇಂದು ಇಂಡೋನೇಷ್ಯಾ ಮತ್ತು ಮಲೇಷ್ಯಾ ಎಂ
ಕರೆಯಲ್ಪಡುವ ಭಾರತದ ಪೂರ್ವ ದಿಕ್ಕಿನಲ್ಲಿರುವ ದ್ವೀಪಗಳಾಗಿವೆ. ಇಂಡೋನೇಷ್ಯಾ ಗಣರಾಜ್ಯದ
ಜಾವಾ, ಸುಮಾತ್ರಾ, ಬೋರ್‌ನಿಯೋ (ಕಾಲಿ ಮಿಂಟನ್), ಮಲೀಬಸ್ (ಸುಲಾವೇಸಿ), ಪಶ್ಚಿಮ ನ್ಯೂ
(ಪಶ್ಚಿಮ ಐರಿಯಾನ್) ಮತ್ತಿತರ ಸಾವಿರಾರು ದ್ವೀಪಗಳು ಸೇರಿವೆ. ಮಲೇಷ್ಯಾ ಗಣರಾಜ್ಯ ಮಲಾ
ಪ್ರದೇಶದ ಹನ್ನೊಂದು ದ್ವೀಪಗಳನ್ನೊಳಗೊಂಡಿದೆ. ಅಲ್ಲದೆ ಉತ್ತರ ಬೋರ್‌ನಿಯೋ ಮತ್ತು ಸಾ
ಪ್ರದೇಶವೂ ಅದರಲ್ಲಿ ಸೇರಿದೆ.

2. 1947ರ ಫೆಬ್ರುವರಿ 1ರಂದು ಮಲೇಷ್ಯಾ ಬ್ರಿಟಿಷ್ ಪ್ರಾಬಲ್ಯದಿಂದ ಮುಕ್ತವಾಯಿ
ಇಂಡೋನೇಷ್ಯಾ 1950ರ ಆಗೋಸ್ತು 17ರಂದು ಹಾಲೇಂಡ್‌ನ ದೀರ್ಘ ಕಾಲದ ದಾಸ್ಯದಿ
ಮುಕ್ತವಾಯಿತು.

ವರ್ಷಗಳೊಳಗಾಗಿ ಮಲಾಯಾ ದ್ವೀಪದಲ್ಲಿ ಇಸ್ಲಾಮಿನ ಪ್ರಚಾರ ನಡೆದ ಇತಿಹಾಸ ನಿಜವಾಗಿಯೂ ಪಾಠಪ್ರದವಾದುದಾಗಿದೆ.

## ಸುಮಾತ್ರಾ

ಸುಮಾತ್ರಾದಲ್ಲಿ ಇಸ್ಲಾಮಿನ ಆರಂಭ 'ಇತ್ಜಾ'ದಿಂದಾಯಿತು. ಅಲ್ಲಿ ಅಬ್ದುಲ್ಲಾ ಆರಿಫ್ ಎಂಬ ಹಿರಿಯ ವ್ಯಕ್ತಿಯೊಬ್ಬರು ಮೊಟ್ಟಮೊದಲು ಇಸ್ಲಾಮಿನ ಸ್ವರವೆಬ್ಬಿಸಿದರು. ಅನಂತರ ಅವರ ಶಿಷ್ಯ ಬುರ್‌ಹಾನುದ್ದೀನ್ ಎಂಬವರು ಪ್ರಿಯಾಮಾನ್‌ನ ತನಕದ ಸಮಸ್ತ ಪಶ್ಚಿಮ ತೀರಕ್ಕೆ ಇಸ್ಲಾಮಿನ ಪರಿಚಯ ಮಾಡಿಸಿದರು. ಕ್ರಿ.ಶ. 1205ರಲ್ಲಿ ಸಮಸ್ತ 'ಇತ್ಜಾ' ರಾಜ್ಯ ಇಸ್ಲಾಮ್ ಸ್ವೀಕರಿಸಿತು. ಅಲ್ಲಿನ ರಾಜನೂ ಇಸ್ಲಾಮ್ ಸ್ವೀಕರಿಸಿದನು ಮತ್ತು ಅವನಿಗೆ 'ಜಹಾನ್ ಶಾ' ಎಂಬ ಬಿರುದು ನೀಡಲಾಯಿತು. ಅಲ್ಲಿಂದ ವ್ಯಾಪಾರಿ ಹಡಗುಗಳ ಮೂಲಕ ಇಸ್ಲಾಮ್ ಉತ್ತರ ಸುಮಾತ್ರಾ ತಲಪಿತು. ಪ್ರಲಾಕ್ ಮತ್ತು ಪ್ರಸೂರಿ ಪ್ರದೇಶಗಳಲ್ಲಿ ಮುಸ್ಲಿಮರ ವ್ಯಾಪಾರಿ ವಸಾಹತುಗಳು ಸ್ಥಾಪನೆಗೊಂಡವು. ಕ್ರಿ.ಶ. 1400ರಲ್ಲಿ ಶೇಖ್ ಇಸ್ಮಾಈಲ್ ಎಂಬವರ ನೇತೃತ್ವದಲ್ಲಿ ಮಕ್ಕಾದ ಕೆಲವು ವಿದ್ವಾಂಸರು ಅಲ್ಲಿಗೆ ತಲಪಿದರು. ಅವರು 'ಲಂಬ್ರಿ'ಯಿಂದ ಆರೋ ಎಂಬ ಸಮಸ್ತ ತೀರ ಪ್ರದೇಶಕ್ಕೆ ಇಸ್ಲಾಮಿನ ಪರಿಚಯ ಮಾಡಿಸಿದರು. ಕೊನೆಗೆ 'ಸಮುದ್ರಾ'ದ ರಾಜನೂ ಇಸ್ಲಾಮ್ ಸ್ವೀಕರಿಸಿದನು. ಅವನಿಗೆ 'ಮಲಿಕುಸ್ಸಾಲಿಹ್' ಎಂಬ ಬಿರುದು ನೀಡಲಾಯಿತು. ಅವನ ಪ್ರಯತ್ನಗಳಿಂದಾಗಿ ಪ್ರಲಾಕ್ ರಾಜ್ಯ ಮುಸ್ಲಿಮ್ ರಾಜ್ಯವಾಗಿ ಮಾರ್ಪಟ್ಟಿತು. ಇಬ್ನ್ ಬತೂತ ತನ್ನ ಯಾತ್ರೆಯನ್ನು ಕ್ರಮಿಸುತ್ತಾ ಇಲ್ಲಿಗೆ ಆಗಮಿಸಿದಾಗ 'ಮಲಿಕುಸ್ಸಾಲಿಹ್'ನ ಪುತ್ರ 'ಮಲಿಕುಝ್ಝಾಹಿರ್' ಅಲ್ಲಿ ಆಡಳಿತ ನಡೆಸುತ್ತಿದ್ದನು. ಸುಲ್ತಾನ್ ಮುಹಮ್ಮದ್ ತುಘಲಕ್‌ನೊಂದಿಗೆ ಅವನ ರಾಯಭಾರ ಸಂಬಂಧವಿತ್ತು.

ಪಾಲಂಬಾನಿಂಗ್‌ನಲ್ಲಿ ಹಿಂದು ಧರ್ಮದ ಪ್ರಭಾವ ಅತ್ಯಂತ ಪ್ರಬಲವಾಗಿತ್ತು. ಹದಿನೈದನೇ ಶತಮಾನದ ಮಧ್ಯ ಭಾಗದಲ್ಲಿ ಜಾವಾದ ಮಹಾ ಇಸ್ಲಾಮೀ ಪ್ರಚಾರಕ 'ರಾಡನ್ ರಹ್ಮತ್' ಅಲ್ಲಿ ಇಸ್ಲಾಮಿನ ಪ್ರಚಾರ ನಡೆಸಿದರು. ಅನಂತರ ಇಸ್ಲಾಮಿನ ಪ್ರಭಾವ ಅಲ್ಲಿ ನಿರಂತರ ಮುಂದುವರಿಯುತ್ತಾ ಹೋಯಿತು. ಆದರೆ ನಿಜಾರ್ಥದಲ್ಲಿ ಅಲ್ಲಿ ಇಸ್ಲಾಮಿನ ಪರಿಚಯ ಹಾಲೇಂಡ್‌ನ ಸರಕಾರದ ಸ್ಥಾಪನೆಯ ನಂತರವಾಯಿತು. ಆಗ ಅಲ್ಲಿನ ಮುಸ್ಲಿಮರು ಕ್ರೈಸ್ತ ಮಿಶನರಿಗಳಿಗೆ ಪ್ರತಿಯಾಗಿ ತಮ್ಮ ಪ್ರಯತ್ನಗಳನ್ನು ತೀವ್ರಗೊಳಿಸಿದರು. ಆದ್ದರಿಂದ ಇಪ್ಪತ್ತನೇ ಶತಮಾನದ ಆದಿಯಿಂದ ಅಲ್ಲಿನ ಮೂರ್ತಿಪೂಜಕ ಸಮುದಾಯ ಹೇರಳ ಸಂಖ್ಯೆಯಲ್ಲಿ ಇಸ್ಲಾಮ್ ಸ್ವೀಕರಿಸುತ್ತಿದೆ.

ದಕ್ಷಿಣ ಸುಮಾತ್ರಾದಲ್ಲಿ ಇಸ್ಲಾಮಿನ ಪ್ರಚಾರ ಅತ್ಯಂತ ಕೊನೆಯ ಕಾಲಘಟ್ಟದಲ್ಲಾಯಿತು. ಅಲ್ಲಿ ಜಾವಾದ ಸರದಾರರಾದ ಮನಿಕ್ ಕಂಬಾಲ ಭೂಮಿ ಎಂಬವರು ಇಸ್ಲಾಮಿನ ಪ್ರಚಾರಕರಾಗಿ ಮೂಡಿ ಬಂದರು. ಅವರು ಬಂಟಾಮ್‌ನಲ್ಲಿ ಇಸ್ಲಾಮ್ ಸ್ವೀಕರಿಸಿದ್ದರು. ಮಕ್ಕಾದಲ್ಲಿ ಅವರು ಇಸ್ಲಾಮೀ ವಿದ್ಯಾಭ್ಯಾಸವನ್ನು ಮುಗಿಸಿದರು. ಅವರು ಲಂಪಾಂಗ್‌ನಲ್ಲಿ

ಅನೇಕ ಮೂರ್ತಿ ಪೂಜಕ ಗೋತ್ರಗಳನ್ನು ಇಸ್ಲಾಮ್ ಸ್ವೀಕರಿಸುವಂತೆ ಮಾಡಿದರು. ಈಗ ಸಮಸ್ತ ಸುಮಾತ್ರಾ ದ್ವೀಪದಲ್ಲಿ 'ಬಟಕ್' ಎಂಬ ಪ್ರದೇಶದಲ್ಲಿ ಮಾತ್ರ ಪುರಾತನ ಮೂರ್ತಿ ಪೂಜೆಯ ಕುರುಹುಗಳು ಬಾಕಿಯುಳಿದಿವೆ. ಸುಮಾತ್ರಾ ನಾಲ್ಕೂ ದಿಕ್ಕಿನಿಂದ ಪ್ರಬಲ ಇಸ್ಲಾಮೀ ಸಾಮ್ರಾಜ್ಯಗಳಿಂದ ಸುತ್ತುವರಿಯಲ್ಪಟ್ಟಿದ್ದ ಕಾಲದಲ್ಲಿ ಇಸ್ಲಾಮಿನ ಕಡೆಗೆ ವಾಲಲಿಲ್ಲ. ಹಾಲೇಂಡ್‌ನ ಮುಸ್ಲಿಮ್ ವಿರೋಧಿ ಸರಕಾರ ಸ್ಥಾಪನೆಗೊಂಡ ನಂತರ ಅದು ಇಸ್ಲಾಮಿನ ಅನುಸರಣೆಗೆ ಅಣಿಯಾಯಿತು. ಹಾಲೇಂಡ್ ಸರಕಾರ ಖಡ್ಗದ ಬಲದಿಂದ ಇಸ್ಲಾಮಿನ ಪ್ರಚಾರವನ್ನು ತಡೆಯಲು ಪ್ರಯತ್ನಿಸಿತು. ಆದರೆ ಅದರಿಂದಾಗಿ ಮುಸ್ಲಿಮರ ಸಂದೇಶ ಪ್ರಚಾರಾಸಕ್ತಿ ಇನ್ನಷ್ಟು ತೀವ್ರವಾಯಿತು. ಅವರು ಕ್ರೈಸ್ತ ಮಿಶನರಿಗಳನ್ನು ಈ ನಿಟ್ಟಿನಲ್ಲಿ ನಿರಂತರ ಸೋಲಿಸುತ್ತಾ ಹೋದರು. ಕ್ರೈಸ್ತ ಮಿಶನರಿಯೊಬ್ಬರ ಪ್ರಕಾರ ಜ್ಞಾನಸ್ನಾನ, (Baptism) ಪಡೆದಿದ್ದ ಎರಡು ಹಳ್ಳಿಗಳು ಒಂದು ಸಂದರ್ಭದಲ್ಲಿ ತಕ್ಷಣ ಇಸ್ಲಾಮ್ ಸ್ವೀಕರಿಸಿದವು. ಹಾಗೆಯೇ ಮಸೀದಿಯ ಇಮಾಮರೊಬ್ಬರ ಪ್ರಯತ್ನಗಳಿಂದಾಗಿ ಸೇಪ್ರೋಕ್‌ನ ಸಮಸ್ತ ಜಿಲ್ಲೆ ಇಸ್ಲಾಮಿನ ಅಧೀನವಾಯಿತು. ಮತ್ತೋರ್ವ ಧರ್ಮ ಪ್ರಚಾರಕರ ಕುರಿತು ಕ್ರೈಸ್ತ ಮಿಶನರಿಗಳು ಹೇಳಿರುವಂತೆ ಅವರು ಹತ್ತು ವರ್ಷಗಳ ಅವಧಿಯಲ್ಲಿ ಮೂರ್ತಿಪೂಜಕ ಗೋತ್ರವೊಂದನ್ನು ಕ್ರೈಸ್ತ ಧರ್ಮದ ಪ್ರಭಾವದಿಂದ ಮುಕ್ತಗೊಳಿಸಿದರು. ಅತ್ಯಂತ ಆಶ್ಚರ್ಯಕರ ಸಂಗತಿಯೆಂದರೆ ಹಾಲೇಂಡ್ ಸರಕಾರದ ಅಧಿಕಾರಿಗಳೂ ಇಸ್ಲಾಮಿನ ಪ್ರಚಾರದ ಕೆಲಸ ನಿರ್ವಹಿಸುತ್ತಿದ್ದರು. ಸರಕಾರದ ಇಸ್ಲಾಮ್ ವಿರೋಧಿ ನೀತಿ ಅವರನ್ನು ತಡೆಯುವಲ್ಲಿ ಸಫಲವಾಗಲಿಲ್ಲ.

ಸುಮಾತ್ರಾ ದ್ವೀಪದಿಂದಾಗಿ ಇಸ್ಲಾಮಿನ ಪ್ರಭಾವ ಪರ್ಯಾಯ ದ್ವೀಪವಾದ ಮಲಾಯಾ ತಲಪಿತು. ಹನ್ನೆರಡನೇ ಶತಮಾನದಲ್ಲಿ ಸುಮಾತ್ರಾದಿಂದ ಅನೇಕ ಮುಸ್ಲಿಮರು ವ್ಯಾಪಾರಾರ್ಥವಾಗಿ ಸಿಂಗಾಪುರದಲ್ಲಿ ಹೋಗಿ ನೆಲೆಸಿದರು. ನೂರು ವರ್ಷಗಳ ನಂತರ ಪಲಕ್ಕಾ ಬಂದರಿನಲ್ಲಿ ಅವರು ತಮ್ಮ ವಸಾಹತನ್ನು ಸ್ಥಾಪಿಸಿದರು. ಅವರ ಪ್ರಯತ್ನಗಳಿಂದಾಗಿ ತೀರ ಪ್ರದೇಶದ ವ್ಯಾಪಾರಿ ಜನಾಂಗದ ಪೈಕಿ ಅನೇಕರು ಇಸ್ಲಾಮ್ ಸ್ವೀಕರಿಸಿದರು. ಅವರಿಂದಾಗಿ ಮಾಲಾಯಾದ ಒಳ ಪ್ರದೇಶಗಳಲ್ಲಿ ಇಸ್ಲಾಮಿನ ಪ್ರಚಾರವಾಯಿತು. ಹದಿನಾಲ್ಕನೇ ಶತಮಾನದಲ್ಲಿ ಅಲ್ಲಿನ ರಾಜನು ಸೈಯದ್ ಅಬ್ದುಲ್ ಅಝೀಝ್ ಎಂಬ ಅರಬ್ ವ್ಯಾಪಾರಿಯೊಬ್ಬರ ಬಳಿ ಇಸ್ಲಾಮ್ ಸ್ವೀಕರಿಸಿದನು. ಅನಂತರ ಅವನನ್ನು ಸುಲ್ತಾನ್ ಮುಹಮ್ಮದ್ ಶಾ ಎಂದು ಹೆಸರಿಸಲಾಯಿತು. ಹದಿನಾರನೇ ಶತಮಾನದ ಆರಂಭದಲ್ಲಿ ಮಲಾಯಾದ ದಕ್ಷಿಣ ರಾಜ್ಯವಾದ ಕ್ವೇಡಾ ಸಹ ಇಸ್ಲಾಮಿನ ಪ್ರಭಾವಕ್ಕೊಳಗಾಯಿತು. ಕ್ರಿ.ಶ. 1501ರಲ್ಲಿ ಅಲ್ಲಿನ ರಾಜನಾದ ಪೀರಾವುಂಗ್ ಮಹಾವುಂಗ್ಸಾ, ಶೇಖ್ ಅಬ್ದುಲ್ಲಾನ ಬಳಿ ಇಸ್ಲಾಮ್ ಸ್ವೀಕರಿಸಿದನು ಮತ್ತು ಅವನನ್ನು ಸುಲ್ತಾನ್ ಮುಝ್‌ಫ್ಲಫ್ ಎಂದು ಹೆಸರಿಸಲಾಯಿತು. ಅವನು ತನ್ನ ಜೀವನವನ್ನು ಇಸ್ಲಾಮಿನ ಪ್ರಚಾರಕ್ಕಾಗಿಯೇ ಮುಡಿಪಾಗಿಟ್ಟನು ಮತ್ತು ತನ್ನ ನಿಧನಕ್ಕೆ ಮೊದಲು ಕ್ವೇಡಾ ರಾಜ್ಯದ ದೊಡ್ಡ ಭಾಗವನ್ನು ಮೂರ್ತಿಪೂಜೆಯ ಶಾಪದಿಂದ ಮುಕ್ತಗೊಳಿಸಿದನು.

ಮಲಾಯಾದಿಂದ ಇಸ್ಲಾಮಿನ ಪ್ರಭಾವ ಸಿಯಾಮ್‌ಗೆ ತಲಪಿತು. ಸಿಂಗಾಪುರದ ಮುಸ್ಲಿಮರು ಇಂಡೋಚೀನಾದ ತನಕ ಅದರ ಪ್ರಭಾವವನ್ನು ವಿಸ್ತರಿಸಿದರು. ಇಂದು ಆ ರಾಷ್ಟ್ರಗಳಲ್ಲಿ ಕಂಡು ಬರುತ್ತಿರುವ ಇಸ್ಲಾಮಿನ ಪ್ರಭಾವವೆಲ್ಲವೂ ಪ್ರಸ್ತುತ ವ್ಯಾಪಾರಿಗಳ ಪ್ರಯತ್ನದ ಫಲವಾಗಿದೆ.

## ಜಾವಾ

ಮಲಾಯಾ ದ್ವೀಪದಲ್ಲಿ ಹಿಂದೂ ಧರ್ಮ ಮತ್ತು ಮೂರ್ತಿ ಪೂಜೆ ಜಾವಾದಲ್ಲಿ ಅತ್ಯಂತ ವ್ಯಾಪಕವಾಗಿತ್ತು. ಮುಸ್ಲಿಮರ ಉನ್ನತ ಬೋಧನೆಗಳ ಹೊರತಾಗಿಯೂ ಆ ಜನರು ಮೂಢನಂಬಿಕೆಗಳನ್ನಾಧರಿಸಿದ ವಿಶ್ವಾಸಗಳಿಗೆ ಕಟಿಬದ್ಧರಾಗಿದ್ದರು. 1768ರ ತನಕ ಅವರು ಮನುಧರ್ಮ ಶಾಸ್ತ್ರಕ್ಕೆ ಬದ್ಧರಾಗಿದ್ದರು. ಆದರೆ ಅದರ ಪರಂಪರಾಗತ ಆಳ ಪ್ರಭಾವವನ್ನು ಇಸ್ಲಾಮಿನ ಶಾಂತ ಪ್ರಚಾರಕರು ಒಂದು ಶತಮಾನದೊಳಗಾಗಿ ದೂರೀಕರಿಸಿದರು. ಈಗ ಅಲ್ಲಿನ ಸಣ್ಣ ಜನಸಂಖ್ಯೆಯೊಂದನ್ನು ಬಿಟ್ಟರೆ ಜಾವಾ ದ್ವೀಪದ ಸಮಸ್ತ ಜನರು ಮುಸ್ಲಿಮರಾಗಿದ್ದಾರೆ. ಪೂರ್ವ ಭಾರತದ ದ್ವೀಪಗಳಲ್ಲಿರುವ ಮುಸ್ಲಿಮರ ಪೈಕಿ ಜಾವಾದ ಮುಸ್ಲಿಮರಲ್ಲಿ ಅತಿ ಹೆಚ್ಚು ಧಾರ್ಮಿಕ ಆಸಕ್ತಿ ಕಂಡು ಬರುತ್ತದೆ.

ಈ ಮಹತ್ಕಾರ್ಯವನ್ನು ಮೊದಲು ಹಾಜಿ ಪುರ್ವಾ ಎಂಬ ವ್ಯಾಪಾರಿಯೊಬ್ಬನು ಆರಂಭಿಸಿದನು. ಅವನು 'ಪಾಜಾಜಾರಿನ್'ನ ರಾಜನ ಹಿರಿಯ ಪುತ್ರನಾಗಿದ್ದನು. ಅವನು ರಾಜಾಳ್ವಿಕೆಯನ್ನು ತನ್ನ ಕಿರಿಯ ಸಹೋದರನಿಗೆ ಬಿಟ್ಟುಕೊಟ್ಟು ಸ್ವತಃ ವ್ಯಾಪಾರಿ ಸರಕುಗಳೊಂದಿಗೆ ಭಾರತಕ್ಕೆ ಬಂದನು. ಭಾರತದಲ್ಲಿ ಅವನಿಗೆ ಲೌಕಿಕ ಸಂಪತ್ತಿನ ಬದಲು ಪಾರಮಾರ್ಥಿಕ ಸಂಪತ್ತು ಲಭ್ಯವಾಯಿತು. ಈ ಸಂಪತ್ತಿನ ಮೂಲಕ ತನ್ನವರನ್ನು ಪುನೀತಗೊಳಿಸುವುದನ್ನೇ ಅವನು ತನ್ನ ಜೀವನದ ಗುರಿಯನ್ನಾಗಿ ಅಂಗೀಕರಿಸಿದನು. ಆದ್ದರಿಂದ ಅರೇಬಿಯಾದ ಧಾರ್ಮಿಕ ವಿದ್ವಾಂಸರೊಂದಿಗೆ ಅವನು ಜಾವಾ ತಲಪಿದನು ಮತ್ತು ತನ್ನ ಜೀವನವನ್ನು ಇಸ್ಲಾಮಿನ ಸೇವೆಗೆ ಮುಡಿಪಾಗಿಟ್ಟನು. ಅನಂತರ ಭಾರತ ಮತ್ತು ಅರೇಬಿಯಾದ ವ್ಯಾಪಾರಿಗಳು ಮತ್ತು ಯಾತ್ರಿಕರು ಆ ದ್ವೀಪದ ಕಡೆಗೆ ಆಕರ್ಷಿತರಾದರು. ಅವರೆಲ್ಲರೂ ಈ ದ್ವೀಪದ ತೀರ ಪ್ರದೇಶಗಳಲ್ಲಿ ಇಸ್ಲಾಮಿನ ಪ್ರಚಾರಗೈದರು. ವ್ಯಾಪಾರಿಗಳ ದೊಡ್ಡ ತಂಡವೊಂದು ಹದಿನಾಲ್ಕನೇ ಶತಮಾನದಲ್ಲಿ ಮೌಲಾನಾ ಸೈಯದ್ ಇಬ್ರಾಹೀಮ್‌ರ ನೇತೃತ್ವದಲ್ಲಿ 'ಗ್ರೆಸಿಕ್' ಪ್ರದೇಶದಲ್ಲಿ ಬಂದು ನೆಲೆಸಿತು. ಅವರಿಂದಾಗಿ ಚರ್‌ಮನ್‌ನ ರಾಜ ಇಸ್ಲಾಮ್ ಸ್ವೀಕರಿಸಿದನು. ಇದು ಜಾವಾದ ಚರಿತ್ರೆಯಲ್ಲಿ ಇಸ್ಲಾಮಿಗೆ ದೊರೆತ ಮೊದಲ ವಿಜಯವಾಗಿದೆ. ಅಲ್ಲಿಂದ ಹತ್ತಿರದ ರಾಜ್ಯಗಳಿಗೆ ಇಸ್ಲಾಮಿನ ಪ್ರಚಾರವಾಗ ತೊಡಗಿತು.

## ರಾಡನ್ ರಹ್ಮತ್‌ರ ಉಗಮ

ಹದಿನೈದನೇ ಶತಮಾನದಲ್ಲಿ ಜಾವಾ ದ್ವೀಪದ ಮಹಾ ಸಂದೇಶ ಪ್ರಚಾರಕರಾದ ರಾಡನ್ ರಹ್ಮತ್'ರ ಉಗಮವಾಯಿತು. ಅವರು ಇಸ್ಲಾಮನ್ನು ಬಡತನದ ಹರಕು

ಜಾಪೆಯಿಂದ ಮೇಲೆತ್ತಿ ಅರಸೊತ್ತಿಗೆಯ ಸುಪ್ಪತ್ತಿಗೆಗೆ ಏರಿಸಿದರು. ಅವರು ರಾಜ ವೈಭವದೊಂದಿಗೆ ಬೆಳೆದವರಾಗಿದ್ದರು ಮತ್ತು ತಾನು ಬಯಸಿದ್ದರೆ ಸ್ವತಃ ಸಿಂಹಾಸನದಲ್ಲಿ ವಿರಾಜಮಾನರಾಗುತ್ತಿದ್ದರು. ಆದರೆ ಅವರ ಮನಸ್ಸಿನಲ್ಲಿ ತನ್ನ ಸ್ವೇಚ್ಛಾವೃತ್ತಿಯ ಬದಲು ಧರ್ಮದ ಸೇವಾಸಕ್ತಿ ಅತೀವವಾಗಿತ್ತು. ಆದ್ದರಿಂದ ಇಸ್ಲಾಮಿನ ಸಂದೇಶ ಪ್ರಚಾರವನ್ನೇ ಅವರು ತಮ್ಮ ಜೀವನದ ಏಕೈಕ ಉದ್ದೇಶವಾಗಿ ಅಂಗೀಕರಿಸಿಕೊಂಡರು.

"ತಮ್ಮ ಆಪ್ತ ಬಂಧುಗಳಿಗೆ ಎಚ್ಚರಿಕೆ ನೀಡಿರಿ. (ಅಶ್ಶುಅರಾ: 214) ಎಂಬ ಪವಿತ್ರ ಕುರ್‌ಆನ್‌ನ ವಾಣಿಯಂತೆ ಮೊಟ್ಟಮೊದಲು ಅವರು ತಮ್ಮ ಕುಟುಂಬದಿಂದಲೇ ಸಂದೇಶ ಪ್ರಚಾರದ ಕೆಲಸವನ್ನಾರಂಭಿಸಿದರು. ಮೊದಲು 'ಚಂಪಾ'ದ ರಾಜನಾಗಿದ್ದ ತನ್ನ ತಾತನನ್ನು ಅವರು ಇಸ್ಲಾಮಿನೆಡೆಗೆ ಆಹ್ವಾನಿಸಿದರು. ಅನಂತರ ಅವರು 'ಪಾಲಂಬಾಂಗ್' ತಲಪಿ ಅಲ್ಲಿ ರಾಜನ ವತಿಯಿಂದ ರಾಜ್ಯಪಾಲನಾಗಿ ನಿಯೋಗಿಸಲ್ಪಟ್ಟಿದ್ದ ತನ್ನ ಸಹೋದರ ಆರ್ಯದಾಮಿರ್‌ನನ್ನು ಮುಸ್ಲಿಮನನ್ನಾಗಿ ಮಾಡಿದರು. ಅನಂತರ ಅವರು ಮೌಲಾನಾ ಜುಮಾದಿಲ್ ಕುಬ್ರಾ ಎಂಬವರ ಸಹಯೋಗದೊಂದಿಗೆ 'ಮಾಜಾಪಾಹಿತ್' (Majapahit)ಗೆ ತಲಪಿ ಅಲ್ಲಿ ರಾಜನಾಗಿದ್ದ ತನ್ನ ಚಿಕ್ಕಪ್ಪನನ್ನು ಇಸ್ಲಾಮಿನೆಡೆಗೆ ಆಹ್ವಾನಿಸಿದರು. ರಾಜ ಸ್ವತಃ ಇಸ್ಲಾಮ್ ಸ್ವೀಕರಿಸಲಿಲ್ಲ. ಆದರೆ ಅವರನ್ನು 'ಅಂಪಿಲ್'ನ ರಾಜ್ಯಪಾಲರನ್ನಾಗಿ ಮಾಡಿ ಇಸ್ಲಾಮಿನ ಪ್ರಚಾರ ನಡೆಸುವ ಪೂರ್ಣ ಸ್ವಾತಂತ್ರ್ಯ ನೀಡಿದನು. ಅಂತೆಯೇ ಅವರು ರಾಜ್ಯಪಾಲರಾಗಿದ್ದ ಅವಧಿಯಲ್ಲಿ 'ಅಂಪಿಲ್'ನ ಮೂರು ಸಾವಿರ ಕುಟುಂಬಗಳನ್ನು ಇಸ್ಲಾಮ್ ಸ್ವೀಕರಿಸುವಂತೆ ಮಾಡಿದರು. ಇಸ್ಲಾಮೀ ಸಂದೇಶ ಪ್ರಚಾರಕರ ದೊಡ್ಡ ತಂಡವೊಂದನ್ನು ಅವರು ಸುತ್ತಮುತ್ತಲಿನ ದ್ವೀಪ ಮತ್ತು ರಾಜ್ಯಗಳಿಗೆ ಕಳುಹಿಸಿಕೊಟ್ಟರು. 'ಮದುರಾ'ದಲ್ಲಿ ಇಸ್ಲಾಮನ್ನು ಹರಡಿದ್ದ ಶೇಖ್ ಖಲೀಫಾ ಹುಸೈನ್ ಅವರಿಂದಲೇ ಕಳುಹಿಸಲ್ಪಟ್ಟವರಾಗಿದ್ದ 'ಬಾಲ್ಮಿಂಗನ್' ಪ್ರಾಂತ್ಯದಲ್ಲಿ ಇಸ್ಲಾಮಿನ ಪ್ರಚಾರ ಮಾಡಿದ ಮೌಲಾನಾ ಇಸ್ಹಾಕ್ ಅವರಿಂದಲೇ ಪ್ರಭಾವಿತರಾದವರಾಗಿದ್ದರು. ಗ್ರೆಸಿಕ್ ಪ್ರದೇಶದಲ್ಲಿ ಮೂರ್ತಿ ಪೂಜೆಯ ನಾಮಾವಶೇಷ ಮಾಡಿದ 'ರಾಡನ್ ಪಾಕೂ' (Radenpaku) ಅವರಿಂದಲೇ ತರಬೇತಿ ಹೊಂದಿದವರಾಗಿದ್ದರು. ಅವರ ಇಬ್ಬರು ಪುತ್ರರು ಕೂಡಾ ಜಾವಾದ ಪ್ರಸಿದ್ಧ ಧರ್ಮ ಪ್ರಚಾರಕರೆಂದು ಪರಿಗಣಿಸಲ್ಪಡುತ್ತಾರೆ. ಅವರ ಇಬ್ಬರು ಸಮೀಪದ ಬಂಧುಗಳಾದ ರಾಡನ್ ಪಟಾಹ್ ಮತ್ತು ರಾಡನ್ ಹುಸೈನ್ ಜಾವಾದಲ್ಲಿ ಹಿಂದೂ ಧರ್ಮದ ಪ್ರಬಲ ಶಕ್ತಿಯಾದ 'ಮಾಜಾ ಪಾಹತ್' ಪ್ರದೇಶವನ್ನು ವಶಪಡಿಸಿಕೊಳ್ಳುವ ಮೂಲಕ ಚರಿತ್ರೆಯಲ್ಲಿ ಪ್ರಸಿದ್ಧರಾಗಿದ್ದಾರೆ. ರಾಡನ್ ಹುಸೈನ್ ಸೇನಾದಂಡನಾಯಕನೆಂಬ ನೆಲೆಯಲ್ಲಿ 'ಮಾಜಾಪಾಹತ್'ನ ಸೇನೆಯನ್ನು ಇಸ್ಲಾಮಿನೆಡೆಗೆ ಆಹ್ವಾನಿಸಿದನು. ರಾಡನ್ ಪಟಾಹ್ ಕ್ರಿ.ಶ. 1478ರಲ್ಲಿ ಸತ್ಯನಿಷೇಧವನ್ನು ಸೋಲಿಸಿ 'ಮಾಜಾಪಾಹತ್' ಪ್ರದೇಶವನ್ನು ಇಸ್ಲಾಮೀ ಸರಕಾರವನ್ನಾಗಿ ಮಾಡಿದರು.

ಪಶ್ಚಿಮ ಜಾವಾದಲ್ಲಿ ಇಸ್ಲಾಮಿನ ಪ್ರಚಾರ ಇದಕ್ಕಿಂತ ದುಸ್ತರವಾದ ಕಾರ್ಯವಾಗಿತ್ತು. ಏಕೆಂದರೆ ಅಲ್ಲಿನ ಹಿಂದೂಗಳು ಸಾಮಾನ್ಯ ಜಾವಾವಾಸಿಗಳಿಗಿಂತ ಹೆಚ್ಚು ಧರ್ಮಶ್ರದ್ಧೆಯುಳ್ಳವರಾಗಿದ್ದರು. ಅಲ್ಲಿ ಮೌಲಾನಾ ಹುಸೈನುದ್ದೀನ್ ಚೆರಿಬೋನ್

(Cheribon)ನಂತಹ ವ್ಯಕ್ತಿಗಳು ಬಹಳ ಸಕ್ರಿಯವಾಗಿ ಇಸ್ಲಾಮಿನ ಪ್ರಚಾರ ಮಾಡಿದ್ದರು. ಹಿಂದೂ ಮತವು ಒಂದು ಹಂತದ ವರೆಗೆ ಸತ್ಯಧರ್ಮವನ್ನು ಎದುರಿಸಿತು. ಕೊನೆಗೆ ಹದಿನಾರನೇ ಶತಮಾನದಲ್ಲಿ ಸತ್ಯಕ್ಕೆ ವಿಜಯ ದೊರೆಯಿತು ಮತ್ತು ಪಾಜಾಜಾರಿನ್‌ನ ಪ್ರದೇಶ ಸಂಪೂರ್ಣವಾಗಿ ಇಸ್ಲಾಮಿನ ವಶವಾಯಿತು.

ಹೀಗೆ ಹನ್ನೆರಡನೇ ಶತಮಾನದ ಆದಿಯಿಂದ ಹದಿನಾರನೇ ಶತಮಾನದ ತನಕದ ನಾನೂರು ವರ್ಷಗಳ ಅವಧಿಯಲ್ಲಿ ಜಾವಾ ದ್ವೀಪ ಸಂಪೂರ್ಣವಾಗಿ ಇಸ್ಲಾಮಿನ ಅಧೀನವಾಯಿತು. ಅಲ್ಲಿ ಯುದ್ಧ- ರಕ್ತಪಾತಗಳು ನಡೆಯಲಿಲ್ಲ. ಕೇವಲ ಧರ್ಮ ಪ್ರಚಾರ ಕಾರ್ಯಗಳಿಂದಾಗಿ ಹಿಂದೂ ಮತವು ಇಸ್ಲಾಮಿನಿಂದ ಪರಾಜಯಗೊಂಡಿತು.

## ಮಲಕ್ಕಾ ದ್ವೀಪ ಸಮುಚ್ಚಯ

ಜಾವಾದ ನಂತರ ಇಸ್ಲಾಮೀ ಶಕ್ತಿಯ ಮತ್ತೊಂದು ಕೇಂದ್ರ 'ಮಲಕ್ಕಾ' ದ್ವೀಪ ಸಮುಚ್ಚಯವಾಗಿದೆ. ಇಲ್ಲಿ ಬಹಳ ತಡವಾಗಿ ಇಸ್ಲಾಮಿನ ಪ್ರಚಾರವಾಯಿತು. ಅನೇಕ ಪ್ರದೇಶಗಳಲ್ಲಿ ಸ್ಪೇನ್ ಮತ್ತು ಪೋರ್ಚುಗೀಸ್ ವ್ಯಾಪಾರಿಗಳು ಹಾಗೂ ಇಸ್ಲಾಮಿನ ಆಗಮನ ಏಕ ಕಾಲದಲ್ಲಾಯಿತು. ಶಾಂತ ಸ್ವಭಾವಿ ಮುಸ್ಲಿಮ್ ವ್ಯಾಪಾರಿಗಳು ಯುದ್ಧ ಸನ್ನದ್ಧರಾದ ಕ್ರೈಸ್ತರ ಉಪಸ್ಥಿತಿಯಲ್ಲಿ ಅತ್ಯಂತ ಯಶಸ್ವಿಯಾಗಿ ಧರ್ಮ ಪ್ರಚಾರ ಕಾರ್ಯ ಕೈಗೊಂಡರು. ಹದಿನೈದನೇ ಮತ್ತು ಹದಿನಾರನೇ ಶತಮಾನದ ಮಧ್ಯಭಾಗದಲ್ಲಿ ಲವಂಗ ಮತ್ತು ಸಾಂಬಾರು ಪದಾರ್ಥಗಳನ್ನು ಹಡಗಿನ ಮೂಲಕ ಸಾಗಿಸುತ್ತಿದ್ದ ಜಾವಾ ಮತ್ತು ಮಲಾಯಾದ ಮುಸ್ಲಿಮ್ ವ್ಯಾಪಾರಿಗಳು ಮೊಟ್ಟ ಮೊದಲು ಅಲ್ಲಿ ಇಸ್ಲಾಮಿನ ಪ್ರಚಾರಕಾರ್ಯವನ್ನಾರಂಭಿಸಿದರು. ಅವರ ಧರ್ಮ ಪ್ರಚಾರಾಸಕ್ತಿಯಿಂದಾಗಿ ಕೆಲವೇ ವರ್ಷಗಳಲ್ಲಿ ಸಮಸ್ತ ದ್ವೀಪ ಸಮುಚ್ಚಯದಲ್ಲಿ ಇಸ್ಲಾಮ್ ಹರಡಿತು. ಅಲ್ಲಿ ನಾಲ್ಕು ಪ್ರಬಲ ಇಸ್ಲಾಮೀ ಸರಕಾರಗಳು ಸ್ಥಾಪನೆಗೊಂಡವು. ಆ ಪೈಕಿ ಮೊದಲನೆಯದು ಟರ್‌ನೇಟ್(Ternate)ನ ಸರಕಾರ. ಅಲ್ಲಿನ ಆಡಳಿತಗಾರ 'ಟರ್‌ನೇಟ್' ಅಲ್ ಮಹಿರಾದ ಗಣನೀಯ ಭಾಗದ ಆಳ್ವಿಕೆಯನ್ನು ಹೊಂದಿದ್ದನು. ಎರಡನೆಯದು ಟಿಡರ್‌ನ ಸರಕಾರವಾಗಿತ್ತು. ಅದರಲ್ಲಿ ಟಿಡರ್ ದ್ವೀಪ, ಅಲ್ ಮಾಹಿರ (Halemahera)ದ ಒಂದು ಭಾಗ, ಸೀರಾಮ್‌ನ ಒಂದು ಭಾಗ ಮತ್ತು ನ್ಯೂಗ್ಯಾನದ ಪಶ್ಚಿಮ ಭಾಗ ಸೇರಿತ್ತು. ಮೂರನೆಯದು ಸುಲ್ತಾನ್ ಗೆಲೆಲೋನ ಸರಕಾರವಾಗಿತ್ತು. ಅವನು ಅಲ್‌ಮಹಿರಾದ ಮಧ್ಯಭಾಗ ಮತ್ತು ಉತ್ತರ ಸೀರಾಮ್‌ನಲ್ಲಿ ಆಳ್ವಿಕೆ ನಡೆಸುತ್ತಿದ್ದನು. ನಾಲ್ಕನೆಯದು 'ಬತ್ಜಾನ್'ನ ಸರಕಾರವಾಗಿತ್ತು. ಅವನು ಬತ್ಜಾನ್(Batjan) ಮತ್ತು ಓಬಿ(Obi) ದ್ವೀಪಗಳಲ್ಲಿ ಆಡಳಿತ ನಡೆಸುತ್ತಿದ್ದನು. ಈ ನಾಲ್ಕು ಸಾಮ್ರಾಜ್ಯಗಳು ಕೆಲವು ಕಾಲ ಮಾತ್ರ ಅಸ್ತಿತ್ವದಲ್ಲಿದ್ದವು. ಅನಂತರ ಕ್ರೈಸ್ತ ಸಾಮ್ರಾಜ್ಯಶಾಹಿಗಳ ಬಿರುಗಾಳಿಯ ಅಬ್ಬರವನ್ನು ತಾಳಲಾರದೆ ಅವೆಲ್ಲವೂ ನೆಲಕಚ್ಚಿದವು. ಆದರೆ ಇಸ್ಲಾಮಿನ ಅಸ್ತಿತ್ವ ಅವರ ಕೃಪಾಶ್ರಯದಲ್ಲಧಿಷ್ಠಿತವಾಗಿರಲಿಲ್ಲ. ಆದ್ದರಿಂದ ಹಾಲೇಂಡ್ ಮುಂತಾದ ಕ್ರೈಸ್ತ ಶಕ್ತಿಗಳಲ್ಲಿ ಒಡಕು ಮೂಡಿದ ನಂತರ ಮಲಕ್ಕಾ ದ್ವೀಪದಲ್ಲಿ ಇಸ್ಲಾಮ್ ತೀವ್ರಗತಿಯಲ್ಲಿ ಹರಡುತ್ತಿದೆ.

ಇಸ್ಲಾಮಿನ ವಿನಾ ಬೇರೆ ಯಾವ ಧರ್ಮಗಳೂ ಬಾಕಿಯುಳಿಯಲಾರದಂತಹ ಪರಿಸ್ಥಿತಿ ಅಲ್ಲಿಗೆ ಸದ್ಯವೇ ಬರಲಿದೆ.

ಈ ದ್ವೀಪಗಳ ಪೈಕಿ ಮೊಟ್ಟ ಮೊದಲು ಟಿಡರ(Tidor) ದ್ವೀಪ ಇಸ್ಲಾಮಿನ ಅಧೀನವಾಯಿತು. ಹದಿನೈದನೇ ಶತಮಾನದಲ್ಲಿ ಶೇಖ್ ಮನ್ಸೂರ್ ಎಂಬ ಅರಬ್ ವ್ಯಾಪಾರಿಯೊಬ್ಬರು ಅಲ್ಲಿನ ರಾಜನನ್ನು ಮುಸ್ಲಿಮನನ್ನಾಗಿ ಮಾಡಿ ಅವರಿಗೆ ಜಮಾಲುದ್ದೀನ್ ಎಂದು ನಾಮಕರಣ ಮಾಡಿದರು. ಕ್ರಿ.ಶ. 1521ರಲ್ಲಿ ಸ್ಪೇನ್‌ನ ಸಾಮ್ರಾಜ್ಯಶಾಹಿಗಳು ತಮ್ಮ ಎರಡನೇ ಅಭಿಯಾನದೊಂದಿಗೆ ಅಲ್ಲಿಗೆ ಆಗಮಿಸಿದಾಗ, ಜಮಾಲುದ್ದೀನ್‌ನ ಪುತ್ರ ಸುಲ್ತಾನ್ ಮನ್ಸೂರ್ ಅಲ್ಲಿ ಆಡಳಿತ ನಡೆಸುತ್ತಿದ್ದನು. ಅಲ್ಲಿ ಇಸ್ಲಾಮ್ ಜನಪ್ರಿಯಗೊಂಡು ಆಗ ಐವತ್ತು ವರ್ಷಗಳಾಗಿತ್ತಷ್ಟೆ. ಪೋರ್ಚುಗೀಸ್ ವ್ಯಾಪಾರಿಗಳ ಪ್ರಕಾರ ಟರ್‌ನೇಟ್‌ನಲ್ಲಿ, ಟಿಡರ್‌ಗಿಂತಲೂ ಮೊದಲು ಇಸ್ಲಾಮಿನ ಪ್ರವೇಶವಾಗಿತ್ತು. ಆದ್ದರಿಂದ 1951ರಲ್ಲಿ ಪೋರ್ಚುಗೀಸರು ಅಲ್ಲಿಗೆ ತಲಪಿದಾಗ, ಇಸ್ಲಾಮ್ ಅಲ್ಲಿ ಪ್ರವೇಶಗೊಂಡು ಎಂಭತ್ತು ವರ್ಷಗಳೇ ಸಂಧಿದ್ದವು ಎಂದು ಅವರ ಇತಿಹಾಸಕಾರರು ಬರೆಯುತ್ತಾರೆ. ಈ ದ್ವೀಪದ ಜನರ ಇಸ್ಲಾಮ್ ಸ್ವೀಕಾರದ ಹಿಂದೆ ವಿಚಿತ್ರ ಘಟನೆಯನ್ನು ಪ್ರಸ್ತಾವಿಸಲಾಗುತ್ತದೆ. ಜಾವಾದ ವ್ಯಾಪಾರಿಯಾದ ವಾತೋ ಮುಲ್ಲಾ ಹುಸೈನ್ ತಮ್ಮ ವ್ಯಾಪಾರಾರ್ಥವಾಗಿ ಅಲ್ಲಿ ಬಂದು ನೆಲೆಸಿದ್ದರು. ಪ್ರತಿನಿತ್ಯ ಬೆಳಿಗ್ಗೆ ಅವರು ಉಚ್ಛ ಸ್ವರದಲ್ಲಿ ಕುರ್‌ಆನ್ ಪಠನ ನಡೆಸುತ್ತಿದ್ದರು. ಅವರ ಕುರ್‌ಆನ್ ವಾಚನವನ್ನು ಕೇಳಿ ಮೂರ್ತಿಪೂಜಕರು ಅವರೆಡೆಗೆ ಆಕರ್ಷಿತರಾದರು. ಹೇರಳ ಸಂಖ್ಯೆಯಲ್ಲಿ ಅವರ ಸುತ್ತ ಜಮಾಯಿಸತೊಡಗಿದರು. ಕೆಲವು ಕಾಲದ ನಂತರ ಮುಸ್ಲಿಮರ ದೊಡ್ಡ ಸಮೂಹವೊಂದು ಅವರ ಸುತ್ತ ಜಮಾಯಿಸಿತು. ಕೊನೆಗೆ 1495ರಲ್ಲಿ ಅಲ್ಲಿನ ರಾಜನೂ ಗ್ರೆಸಿಕ್ ತಲಪಿ ಇಸ್ಲಾಮ್ ಸ್ವೀಕರಿಸಿದನು.

ಅಂಬೊಯಿನಾದಲ್ಲಿ ಪಾಟಿ ಪುಟಾಹ್ (Patiputah) ಎಂಬ ವ್ಯಾಪಾರಿಯೊಬ್ಬ ಇಸ್ಲಾಮಿನ ಪ್ರಚಾರ ಮಾಡಿದನು. ಜಾವಾದಿಂದ ತಂದ ಈ ಅಮೂಲ್ಯ ಸರಕನ್ನು ಅವನು 'ಅಂಬೊಯಿನಾ'ದ ತೀರ ಪ್ರದೇಶದಾದ್ಯಂತ ಹರಡಿದನು. ಅದು ಪೋರ್ಚುಗೀಸ್ ಸಾಮ್ರಾಜ್ಯಶಾಹಿಗಳ ಉಚ್ಛ್ರಾಯದ ಆರಂಭ ಕಾಲವಾಗಿತ್ತು. ಪೋರ್ಚುಗೀಸರು ಆರಂಭದಲ್ಲಿ ಖಡ್ಗದ ಬಲದಿಂದ ಈ ಧರ್ಮದ ಪ್ರಗತಿಯನ್ನು ತಡೆಯ ಬಯಸಿದರು. ಅವರು ಶಿಲುಬೆ ಯುದ್ಧದ ಪ್ರತೀಕಾರ ತೀರಿಸಬಯಸಿದ್ದರು. ಆದರೆ ಅವರ ತೀವ್ರ ಪ್ರತಿರೋಧದ ಹೊರತಾಗಿಯೂ ಧರ್ಮದ ಪ್ರಚಾರಕ್ಕೆ ಯಾವುದೇ ರೀತಿಯ ಅಡಚಣೆಯುಂಟಾಗಲಿಲ್ಲ. ಅದಕ್ಕೆ ಪ್ರತಿಯಾಗಿ ಜನಸಾಮಾನ್ಯರಲ್ಲಿ ಇಸ್ಲಾಮ್ ಹೆಚ್ಚು ಜನಪ್ರಿಯವಾಗತೊಡಗಿತು. ಆದ್ದರಿಂದ ಹದಿನಾರನೇ ಶತಮಾನದ ಅಂತ್ಯಭಾಗದಲ್ಲಿ ಪೋರ್ಚುಗೀಸರಲ್ಲಿ ಆಂತರಿಕ ಬಿಕ್ಕಟ್ಟು ತಲೆದೋರಿದಾಗ ಅಂಬೋಯಿನಾದ ವಾಸಿಗಳು ಕ್ರೈಸ್ತಮಿಶನರಿಗಳನ್ನು ಅಲ್ಲಿಂದ ಹೊಡೆದೋಡಿಸಿದರು ಮತ್ತು ತಂಡೋಪತಂಡವಾಗಿ ಇಸ್ಲಾಮ್ ಸ್ವೀಕಾರ ಮಾಡಿದರು. ಅವರು ಇತರ ದ್ವೀಪಗಳೊಂದಿಗೆ ವ್ಯಾಪಾರಿ ಸಂಪರ್ಕವನ್ನು ಹೊಂದಿದ್ದರು. ಆದ್ದರಿಂದ ಮಲಕ್ಕಾದ ಇತರ ದ್ವೀಪಗಳಿಗೂ ಅವರ ಮೂಲಕ ಇಸ್ಲಾಮಿನ ಪ್ರವೇಶವಾಯಿತು.

## ಬೋರ್ನಿಯೋ ದ್ವೀಪ

ಕ್ರಿ.ಶ. 1521ರಲ್ಲಿ ಗ್ಲೋಲೋ ರಾಜ ಇಸ್ಲಾಮ್ ಸ್ವೀಕರಿಸಿದನು. ಅದೇ ಶತಮಾನದಲ್ಲಿ ಬೋರ್ನಿಯೋ ದ್ವೀಪವೂ ಇಸ್ಲಾಮಿನ ಬೆಳಕಿನಿಂದ ಪುನೀತವಾಯಿತು. ಮೊಟ್ಟಮೊದಲು ಬಂಜರ್ ಮಾಸಿನ್ (Banjarmasin) ರಾಜ್ಯ ಇಸ್ಲಾಮಿನ ವಶವಾಯಿತು. ಅನಂತರ ಉತ್ತರ ಬೋರ್ನಿಯೋದ ಬ್ರೂನ್ಯಾಯಿ ರಾಜ್ಯದಲ್ಲಿ ಇಸ್ಲಾಮಿನ ಪ್ರಚಾರವಾಯಿತು. ಅನಂತರ ಕ್ರಿ.ಶ. 1550ರಲ್ಲಿ ಪಾಲಂಬಾನಿಂಗ್‌ನ ವ್ಯಾಪಾರಿಗಳು ಸುಕಡಾನ(Sukadana) ರಾಜ್ಯದಲ್ಲಿ ಇಸ್ಲಾಮನ್ನು ಹರಡಿದರು. ಕ್ರಿ.ಶ. 1590ರಲ್ಲಿ ಬೋರ್ನಿಯೋದ ಅತ್ಯಂತ ಬಲಿಷ್ಠ ರಾಜ ಇಸ್ಲಾಮ್ ಸ್ವೀಕರಿಸಿದನು. ತದನಂತರ ಅವನನ್ನು ಸುಲ್ತಾನ್ ಮುಹಮ್ಮದ್ ಸಫೀಯುದ್ದೀನ್ ಎಂದು ಹೆಸರಿಸಲಾಯಿತು. ಕ್ರಿ.ಶ. 1600ರಲ್ಲಿ ಅಲ್ಲಿಗೆ ತಲಪಿದ ಪಾಶ್ಚಿಮಾತ್ಯ ಯಾತ್ರಿಕನೊಬ್ಬ ಕಂಡಂತೆ, ತೀರ ಪ್ರದೇಶದವರೆಲ್ಲರೂ ಇಸ್ಲಾಮ್ ಸ್ವೀಕರಿಸಿದ್ದರು ಹಾಗೂ ಒಳಪ್ರದೇಶಗಳಲ್ಲಿ ಮಾತ್ರ ಮೂರ್ತಿ ಪೂಜೆಯ ಪ್ರಭಾವ ಬಾಕಿಯುಳಿದಿತ್ತು. ಹದಿನೆಂಟನೇ ಶತಮಾನದ ಆರಂಭದಿಂದ ಬೋರ್ನಿಯೋದ ಆಂತರಿಕ ಪ್ರದೇಶಗಳಲ್ಲೂ ಇಸ್ಲಾಮ್ ಹರಡಲಾರಂಭಿಸಿತು. ಒಂದೆಡೆ ಬಂಡವಾಳಶಾಹಿಗಳು ಮತ್ತು ಸುಸಂಘಟಿತ ಕ್ರೈಸ್ತ ಸಮೂಹಗಳು ತಮ್ಮ ಧರ್ಮದ ಪ್ರಚಾರ ನಡೆಸುತ್ತಿದ್ದರೆ ಇನ್ನೊಂದೆಡೆ ಅಸಂಘಟಿತ ಮತ್ತು ಬಡವರಾದ ಮುಸ್ಲಿಮ್ ವ್ಯಾಪಾರಿಗಳು ಸಹಧರ್ಮ ಪ್ರಚಾರ ನಡೆಸುತ್ತಿದ್ದರು. ಆದರೆ ಕ್ರೈಸ್ತ ಮಿಶನರಿಗಳ ಪರಾಭವ ಮತ್ತು ಮುಸ್ಲಿಮರ ವಿಜಯವನ್ನು ಕಂಡು ಜಗತ್ತು ಅಚ್ಚರಿಗೊಂಡಿತು. ಅವರ ಕೆಲವು ವರ್ಷಗಳ ಪ್ರಯತ್ನದಿಂದಾಗಿ ಉತ್ತರ ಬೋರ್ನಿಯೋದ ಅತ್ಯಂತ ದೊಡ್ಡ ಸಮುದಾಯವಾದ 'ಐದಾನ್' ಸಮುದಾಯ ಇಸ್ಲಾಮ್ ಸ್ವೀಕರಿಸಿತು. ಮಧ್ಯ ಬೋರ್ನಿಯೋದ 'ಡಾಯಿಕ್' ಸಮುದಾಯವೂ ಕ್ರೈಸ್ತ ಮಿಶನರಿಗಳಿಗೆ ಪ್ರತಿಯಾಗಿ ಇಸ್ಲಾಮನ್ನು ಹೆಚ್ಚು ಇಷ್ಟಪಡುತ್ತಿತ್ತು.

## ಸೆಲೆಬಸ್ ದ್ವೀಪ

ಇಸ್ಲಾಮಿನ ಪ್ರಚಾರದ ಸಾಮಾನ್ಯ ತತ್ವ ಸೆಲೆಬಸ್ (Celebes) ದ್ವೀಪದಲ್ಲೂ ಮರುಕಳಿಸಿತು. ಮೊದಲು ಜಾವಾ ಮತ್ತು ಮಲಾಯಾದ ವ್ಯಾಪಾರಿಗಳು ಇಸ್ಲಾಮಿನೊಂದಿಗೆ ಅಲ್ಲಿನ ತೀರ ಪ್ರದೇಶಗಳನ್ನು ತಲಪಿದರು. ಅನಂತರ ಸ್ವದೇಶಿ ವ್ಯಾಪಾರಿಗಳ ಮೂಲಕ ಅದು ದೇಶದ ಒಳ ಭಾಗಗಳಿಗೆ ತಲಪಿತು. ಕ್ರಿ.ಶ. 1540ರಲ್ಲಿ ಪೋರ್ಚುಗೀಸ್ ಸಾಮ್ರಾಜ್ಯಶಾಹಿಗಳು ಅಲ್ಲಿಗೆ ತಲಪಿದಾಗ ಇಸ್ಲಾಮ್ ಅಲ್ಲಿ ಇನ್ನೂ ಪ್ರಾಥಮಿಕ ಹಂತದಲ್ಲಿತ್ತು. ಗೋವಾ ಪ್ರದೇಶದಲ್ಲಿ ಮಾತ್ರ ಕೆಲವು ಮುಸ್ಲಿಮರು ವಾಸವಾಗಿದ್ದರು. ಅರವತ್ತು ವರ್ಷಗಳೊಳಗಾಗಿ ಅಲ್ಲಿನ ತೀರ ಪ್ರದೇಶ ಸಂಪೂರ್ಣವಾಗಿ ಇಸ್ಲಾಮಿನ ವಶವಾಯಿತು. ಮಕಾಸಿರ್ ರಾಜ್ಯದಲ್ಲಿ ಅಲ್ಲಿನ ರಾಜನ ಸಮೇತ ಎಲ್ಲರೂ ಇಸ್ಲಾಮ್ ಸ್ವೀಕರಿಸಿದರು. ಮಕಾಸಿರ್‌ನ ಅಲ್ಫುರ್ ಮತ್ತು ಬೋಗಿ ಸಮುದಾಯಗಳಲ್ಲಿ ಇಸ್ಲಾಮ್ ಹರಡಿತು. ಅದರಲ್ಲೂ ಇಸ್ಲಾಮ್ ಸ್ವೀಕಾರದ ನಂತರ ಬೋಗಿ ಸಮುದಾಯದ ಸುಪ್ತ ಪ್ರತಿಭೆಗಳು ಜಾಗೃತವಾಯಿತು. ತನ್ನ ಬುದ್ಧಿ ಮತ್ತೆ, ಧೈರ್ಯ

ಮತ್ತು ಕಠಿಣ ದುಡಿಮೆಯಿಂದಾಗಿ ಆ ಸಮುದಾಯ ಸಮಸ್ತ ಮಲಕ್ಕಾ ದ್ವೀಪದ ಅತ್ಯಂತ ಸುಸಂಸ್ಕೃತ ಸಮುದಾಯವಾಗಿ ಮಾರ್ಪಟ್ಟಿತು. ಇಂದು ಅದು ಧರ್ಮ ಪ್ರಚಾರಕ ಸಮುದಾಯವೆಂಬ ತನ್ನ ವೈಶಿಷ್ಟ್ಯದಿಂದಾಗಿ ಸಮಸ್ತ ಪೂರ್ವ ಏಶ್ಯಾದಲ್ಲಿ ವಿಶೇಷ ಸ್ಥಾನಮಾನವನ್ನು ಹೊಂದಿದೆ. ಈ ಸಮುದಾಯಕ್ಕೆ ಸೇರಿದ ವ್ಯಾಪಾರಿಗಳು ನ್ಯೂಗ್ಯಾನದಿಂದ ಸಿಂಗಾಪುರದ ತನಕ ತಮ್ಮ ವ್ಯಾಪಾರಿ ಹಡಗುಗಳ ಮೂಲಕ ಸಂಚರಿಸುತ್ತಿರುತ್ತಾರೆ ಮತ್ತು ಅವರಿಂದಾಗಿ ಅಲ್ಲಿ ಇಸ್ಲಾಮ್ ಧೃತ ಗತಿಯಲ್ಲಿ ಬೆಳೆಯುತ್ತಿದೆ. ಸಂಬಾವ, ಲೊಂಬೋಕ್, ಚ್ಯೂಬ್ ಚಂದಲ್ ದ್ವೀಪ ಮುಂತಾದೆಡೆಗಳಲ್ಲಿ ಅವರಿಂದಾಗಿ ಇಸ್ಲಾಮ್ ಧರ್ಮದ ಪ್ರಚಾರವಾಯಿತು. ಸೆಲೆಬಸ್‌ನಲ್ಲೂ ಅದು ಕ್ರೈಸ್ತ ಧರ್ಮವನ್ನು ಪರಾಜಯಗೊಳಿಸಿತು. ಹದಿನೆಂಟನೇ ಶತಮಾನದಲ್ಲಿ ಕ್ರೈಸ್ತ ಧರ್ಮ ಪ್ರಚಾರಕರು ಬೋಲಾಂಗ್ ಮತ್ತು ಮೊಂಗೊಂಡಾವ್‌ನ ರಾಜನನ್ನು ಕ್ರೈಸ್ತ ಧರ್ಮಕ್ಕೆ ಮತಾಂತರಿಸಿದ್ದರು. ಅವರ ಪ್ರಭಾವದಿಂದಾಗಿ ಸಂಪೂರ್ಣ ರಾಜ್ಯದಲ್ಲಿ ಕ್ರೈಸ್ತ ಧರ್ಮದ ಪ್ರಭಾವವಿತ್ತು. ಆದರೆ ಬೋಗಿ ವ್ಯಾಪಾರಿಗಳು ಒಂದು ಶತಮಾನದೊಳಗಾಗಿ ಆ ಪ್ರದೇಶವನ್ನು ಕ್ರೈಸ್ತ ಧರ್ಮದ ಪ್ರಭಾವದಿಂದ ಮುಕ್ತಗೊಳಿಸಿದರು. ಕೊನೆಗೆ 1844ರಲ್ಲಿ ಅಲ್ಲಿನ ರಾಜ ಜೋಕೂಬಸ್ ಸ್ವತಃ ಇಸ್ಲಾಮ್ ಸ್ವೀಕರಿಸಿದನು.

## ಫಿಲಿಫೈನ್ಸ್ ದ್ವೀಪ

ಶಸ್ತ್ರಾಸ್ತ್ರಗಳ ಉಪಯೋಗವಿಲ್ಲದೆ ಇಸ್ಲಾಮಿನ ಕೀರ್ತಿ ಪತಾಕೆ ಹಾರಿದ ಅತ್ಯಂತ ದೊಡ್ಡ ನಿದರ್ಶನವನ್ನು ಫಿಲಿಪೈನ್ಸ್‌ನಲ್ಲಿ ಕಾಣಬಹುದಾಗಿದೆ. ಅಲ್ಲಿ ಇಸ್ಲಾಮಿನ ಆರಂಭವು ಮಲಾಯಾದ ವ್ಯಾಪಾರಿಯಾದ ಶರೀಫ್ ಕಾಬಿಂಗ್ ಸ್ವಾನ್‌ನ ಮೂಲಕವಾಯಿತು. ಅವರು ತಮ್ಮ ಕೆಲವು ಸಂಗಾತಿಗಳೊಂದಿಗೆ 'ಮಿಂದನಾವ್'ನಲ್ಲಿ ಬಂದು ನೆಲೆಸಿದ್ದರು. ಅಲ್ಲಿ ಅವರು ಹೇರಳ ಸಂಖ್ಯೆಯಲ್ಲಿ ಫಿಲಿಫೈನ್ಸ್ ವಾಸಿಗಳನ್ನು ಇಸ್ಲಾಮ್ ಸ್ವೀಕರಿಸುವಂತೆ ಮಾಡಿದರು. ಅನಂತರ ಮುಸ್ಲಿಮ್ ವ್ಯಾಪಾರಿಗಳ ಆಗಮನ ಮತ್ತು ಇಸ್ಲಾಮಿನ ಪ್ರಚಾರದ ದೀರ್ಘ ಸರಣಿಯೇ ಆರಂಭಗೊಂಡಿತು. ಅಲ್ಲಿನ ಹಿಂದುಳಿದ ಬುಡಕಟ್ಟುಗಳಲ್ಲಿ ಇಸ್ಲಾಮಿನ ಪ್ರಭಾವ ಅತ್ಯಂತ ಸ್ಫುಟವಾಗಿತ್ತು. ಆದ್ದರಿಂದಲೇ ಕ್ರಿ.ಶ. 1521ರಲ್ಲಿ ಸ್ಪೇನ್‌ನ ಸಾಮ್ರಾಜ್ಯಶಾಹಿಗಳು ಅಲ್ಲಿಗೆ ತಲಪಿದಾಗ ಅವರು ಮುಸ್ಲಿಮ್ ಮತ್ತು ಮುಸ್ಲಿಮೇತರ ಸಮಾಜದ ಸಾಮಾಜಿಕ, ಸಾಂಸ್ಕೃತಿಕ ಮತ್ತು ನೈತಿಕ ನೆಲೆಗಟ್ಟುಗಳಲ್ಲಿ ಅತ್ಯಂತ ಸುವ್ಯಕ್ತವಾದ ಅಂತರವನ್ನು ಗಮನಿಸಿದರು. ಹಿಂದುಳಿದ ಮೂರ್ತಿಪೂಜಕ ಸಮುದಾಯಗಳಲ್ಲಿ ಬಹಳ ಸಂಕ್ಷಿಪ್ತ ಕಾಲಾವಧಿಯಲ್ಲಿ ಈ ಮಹಾ ಕ್ರಾಂತಿ ಹೇಗೆ ಸಂಭವಿಸಿತೆಂದು ಅವರು ಆಶ್ಚರ್ಯಚಕಿತರಾದರು. ಅಲ್ಲಿ ಇಸ್ಲಾಮ್‌ನ ಪ್ರಚಾರ ಆಗ ತಾನೇ ನಡೆದಿತ್ತಾದ್ದರಿಂದ ಸ್ಪೇನ್‌ನ ಜನರು ಇಸ್ಲಾಮನ್ನು ಅಳಿಸಿ ಕ್ರೈಸ್ತ ಮತವನ್ನು ಹರಡಲು ಅತ್ಯಂತ ಕಠಿಣ ಕ್ರಮಗಳನ್ನು ಆರಂಭಿಸಿದರು. ಖಡ್ಗದ ಬಲದಿಂದ ಜನರನ್ನು ಕ್ರೈಸ್ತರನ್ನಾಗಿ ಮಾಡಲಾರಂಭಿಸಿದರು. ಈ ಸರಣಿ ಇಪ್ಪತ್ತನೇ ಶತಮಾನದ ನಾಗರಿಕ ಯುಗದ ಆರಂಭದ ತನಕವೂ ಮುಂದುವರಿಯಿತು. ಧರ್ಮದ ಹೆಸರಿನಲ್ಲಿ ಅಕ್ರಮವೆಸಗಲು

ೇನ್ ಕಿಂಚಿತ್ತೂ ಹಿಂಜರಿಯಲಿಲ್ಲ. ಅದರ ಹೊರತಾಗಿಯೂ ಅಲ್ಲಿ ಇಸ್ಲಾಮ್ ಕ್ರೈಸ್ತ ರ್ಮಕ್ಕಿಂತ ಕ್ಷಿಪ್ರಗತಿಯಲ್ಲಿ ಬೆಳೆಯಿತು. ಫಿಲಿಪ್ಪೈನ್ಸ್‌ನ ಸಾವಿರಾರು ಜನರು ಅಲ್ಲಿನ ವಿವಿಧ ್ರದೇಶಗಳಿಂದ ಓಡೋಡಿ ಬಂದು 'ಮಿಂದನಾವ್' ಮತ್ತು 'ಸೋಲೋದ' ಇಸ್ಲಾಮಿ ಾಜ್ಯಗಳಲ್ಲಿ ನೆಲೆಸಿದರು. ತಂಡೋಪತಂಡವಾಗಿ ಇಸ್ಲಾಮ್ ಸ್ವೀಕರಿಸಿದರು. ಅಲ್ಲಿ ಧಾರ್ಮಿಕ ಂಸೆಯ ಯುಗ ಕೊನೆಗೊಂಡು ಅಮೆರಿಕದ ಪ್ರಾಬಲ್ಯವುಂಟಾದಾಗ ಇಸ್ಲಾಮಿನ ಪ್ರಚಾರದ ತಿಯೂ ಆಶ್ಚರ್ಯಕರ ರೀತಿಯಲ್ಲಿ ಕುಂಠಿತವಾಯಿತು. ಆದರೆ ಶಾಂತಿ ುರುಸ್ಥಾಪನೆಗೊಂಡದ್ದರಿಂದ ಮುಸ್ಲಿಮ್ ವ್ಯಾಪಾರಿಗಳು ಹೇರಳ ಸಂಖ್ಯೆಯಲ್ಲಿ ಆ ಾಗದಲ್ಲಿ ಹರಡಿದರು. ಇತ್ತೀಚಿನ ವರದಿಗಳಂತೆ ಅಲ್ಲಿ ಶಾಂತಿಯುತವಾದ ಇಸ್ಲಾಮಿ ್ರಚಾರ ಕಾರ್ಯ ಮತ್ತೊಮ್ಮೆ ಆರಂಭಗೊಂಡಿದೆ.

## ್ಯೂಗ್ಯಾನ

ನ್ಯೂಗ್ಯಾನದಲ್ಲಿ ಇಸ್ಲಾಮಿನ ಪ್ರಚಾರ ಪ್ರಸಕ್ತ ಯುಗಕ್ಕೆ ಸಂಬಂಧಿಸಿದ ವಿಷಯವಾಗಿದೆ. ಲ್ಲಿ ಇಸ್ಲಾಮ್‌ನ ಪ್ರಚಾರ ಬಹುತೇಕ ತೀರ ಪ್ರದೇಶಗಳಲ್ಲಾಯಿತು. ಆರಂಭದಲ್ಲಿ ಅಲ್ಲಿ ಶ್ಚಿಮ ಭಾಗ 'ಸುಲ್ತಾನ್ ಬತ್‌ಜಾನ್'ನ ಅಧೀನದಲ್ಲಿತ್ತು. ಆದ್ದರಿಂದ ಹದಿನಾರನೇ ತಮಾನದಲ್ಲಿ ವಾಯುವ್ಯ ಗ್ಯಾನಾದಲ್ಲಿ ಇಸ್ಲಾಮಿನ ಪ್ರಚಾರ ತೀವ್ರವಾಗುತ್ತಾ ಹೋಯಿತು. .ಶ. 1606ರಲ್ಲಿ ಮುಸ್ಲಿಮ್ ವ್ಯಾಪಾರಿಗಳು ಪಶ್ಚಿಮ ಭಾಗಗಳಿಗೂ ಇಸ್ಲಾಮನ್ನು ಕೊಂಡು ೋದರು ಹಾಗೂ ಓನಿಯನ್ ಪರ್ಯಾಯ ದ್ವೀಪದಿಂದ ಮೂರ್ತಿ ಪೂಜೆಯ ನಾಮಾವಶೇಷ ಾಡಿದರು. ಆದರೆ ಅದರ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಇಸ್ಲಾಮಿನ ಪ್ರಚಾರ ಹತ್ತೊಂಭತ್ತನೇ ತಮಾನದಲ್ಲಷ್ಟೇ ಆಯಿತು. ಹತ್ತೊಂಭತ್ತನೇ ಶತಮಾನದ ಮಧ್ಯ ಭಾಗದಲ್ಲಿ ಆದಿ(Adi) ್ವೀಪ ಇಸ್ಲಾಮಿನ ವಶವಾಯಿತು. ಇಪ್ಪತ್ತನೇ ಶತಮಾನದ ಆರಂಭದಲ್ಲಿ ಸೀರಾಮ್ ಮತ್ತು ೋರಾಮ್‌'ನ ಮುಸ್ಲಿಮ್ ವ್ಯಾಪಾರಿಗಳು 'ಪಿಲಾವ' ಮುಂತಾದ ದ್ವೀಪಗಳಲ್ಲಿ ಇಸ್ಲಾಮಿನ ್ರಚಾರ ಮಾಡಿದರು. 'ಕಾಯಿ' ದ್ವೀಪದಲ್ಲಿ ಹತ್ತೊಂಭತ್ತನೇ ಶತಮಾನದ ಮಧ್ಯಭಾಗದ ನಕ ಇಸ್ಲಾಮ್‌ನ ಅಸ್ತಿತ್ವ ಇರಲಿಲ್ಲ. ಅಲ್ಲಿ 'ಬಂದಾ' ದ್ವೀಪದ ಕೆಲವು ಮುಸ್ಲಿಮ್ ್ಯಾಪಾರಿಗಳು ವಾಸವಾಗಿದ್ದರಷ್ಟೆ. ಕ್ರಿ.ಶ. 1878ರಲ್ಲಿ ಅಲ್ಲಿ ಕ್ಷಿಪ್ರ ಗತಿಯಲ್ಲಿ ಇಸ್ಲಾಮಿನ ್ರಚಾರ ಕಾರ್ಯ ಆರಂಭಗೊಂಡಿತು. ಕೆಲವೇ ವರ್ಷಗಳಲ್ಲಿ ಮದುರಾ, ಜಾವಾ ಮತ್ತು ಬಾಮಿಯ ಮುಸ್ಲಿಮ್ ವ್ಯಾಪಾರಿಗಳು 'ಕಾಯಿ' ದ್ವೀಪದ ವಾಸಿಗಳು ಹೇರಳ ಸಂಖ್ಯೆಯಲ್ಲಿ ಸ್ಲಾಮ್ ಸ್ವೀಕರಿಸುವಂತೆ ಮಾಡಿದರು. ಈಗ ಅಲ್ಲಿನ ಜನಸಂಖ್ಯೆಯ ಅರ್ಧಕ್ಕೂ ಹೆಚ್ಚಿನ ಾಗ ಮುಸ್ಲಿಮರಾಗಿದ್ದಾರೆ.

ಮಲಾಯಾ ದ್ವೀಪದಲ್ಲಿ ಇಸ್ಲಾಮಿಗೆ ಸಂಧ ಶೋಭಾಯಮಾನ ವಿಜಯದ ಸಂಕ್ಷಿಪ್ತ ವರವನ್ನು ಈ ಪಂಕ್ತಿಗಳಲ್ಲಿ ನೀವು ಗಮನಿಸಿದಿರಿ. ಇದು ಆರು ಶತಮಾನಗಳ ಅವಧಿಯಲ್ಲಿ ುಸ್ಲಿಮ್ ವ್ಯಾಪಾರಿಗಳು ಮತ್ತು ಸಾಮಾನ್ಯ ಯಾತ್ರಿಕರು ನಡೆಸಿದ ಶಾಂತಿಯುತ ಪ್ರಯತ್ನದ

ಪರಿಣಾಮವಾಗಿದೆ. ಅವರ ಬಳಿ ಖಡ್ಗ ಅಥವಾ ಅಧಿಕಾರ ಶಕ್ತಿಯಿರಲಿಲ್ಲ. ಬದಲಾಗಿ ಸಂದೇ ಪ್ರಚಾರದ ಅದಮ್ಯ ಚೇತನ ಮಾತ್ರವೇ ಅವರಲ್ಲಿ ಜಾಗೃತವಾಗಿತ್ತು. ಅದರಿಂದಾಗಿಯೆ ಯಾತ್ರೆಯ ಅಪಾಯ, ನಷ್ಟ ಮತ್ತು ವ್ಯಾಪಾರಿ ಲಾಭದ ಭೌತಿಕ ಚಟುವಟಿಕೆಗಳ ಮಧ್ಯೆಯೂ ಅವರಲ್ಲಿನ ಈ ಚೇತನ ಅವನ್ನು ಧರ್ಮದ ಸೇವೆಗೆ ಅಣಿಗೊಳಿಸಿತು. ಅದು ಅವರಲ್ಲಿ ಎಂತಹ ತನ್ಮಯತೆಯನ್ನು ಬೆಳೆಸಿತೆಂದರೆ ಅವರು ಬೇರೆಲ್ಲ ಧ್ಯೇಯಗಳಿಗೆ ಎರಡನೇ ದರ್ಜೆಯ ಮಹತ್ವ ಕೊಟ್ಟು ಇಸ್ಲಾಮಿನ ಪ್ರಚಾರವನ್ನು ತಮ್ಮ ಪ್ರಾಥಮಿಕ ಉದ್ದೇಶವಾಗಿ ಅಂಗೀಕರಿಸಿಕೊಂಡರು ಆಫ್ರಿಕಾವನ್ನು ಹೊರತು ಪಡಿಸಿದರೆ, ಜಾಗತಿಕ ಮುಸ್ಲಿಮರೆಲ್ಲರೂ ಧರ್ಮ ಪ್ರಚಾರ ಕಾರ್ಯ ಕರ್ತವ್ಯದಿಂದ ವಿಮುಖರಾಗಿರುವ ಈ ಕಾಲದಲ್ಲೂ ಪೂರ್ವ ಏಶ್ಯಾದ ದ್ವೀಪಗಳಲ್ಲಿ ಮುಸ್ಲಿಮ್ ಜನ ಸಾಮಾನ್ಯರಲ್ಲಿ ಈ ಆಸಕ್ತಿ ಕಂಡು ಬರುತ್ತದೆ. ಆದ್ದರಿಂದಲೇ ವ್ಯಾಪಾರಿಗಳ ಮಾತ್ರವಲ್ಲದೆ ಹಾಲೆಂಡ್ ಸರಕಾರದ ಅಧೀನದಲ್ಲಿ ಕೆಲಸ ಮಾಡುವ ಸರಕಾರಿ ನೌಕರರೂ ಇಸ್ಲಾಮಿನ ಪ್ರಚಾರದ ಕರ್ತವ್ಯವನ್ನು ನೆರವೇರಿಸುವುದನ್ನು ನಾವು ಕಾಣುತ್ತೇವೆ. ಅವರ ಮಲಾಯ್ಯಾ ಭಾಷೆಯಲ್ಲಿ ವಿಪುಲ ಸಾಹಿತ್ಯಗಳನ್ನು ಸೃಷ್ಟಿಸಿದರು. ಸರಕಾರಿ ಭಾಷೆಯೆಂಬ ನೆಲೆಯಲ್ಲಿ ಮಲಾಯ್ಯಾ ಭಾಷೆಯನ್ನು ಕಲಿಯುವವರು ಇಸ್ಲಾಮಿನ ಬೋಧನೆಗಳಿಂದಲೂ ಪ್ರಭಾವಿತರಾಗುತ್ತಾರೆ ಮತ್ತು ಹಲವೊಮ್ಮೆ ಇಸ್ಲಾಮ್ ಸ್ವೀಕಾರ ಮಾಡುತ್ತಾರೆ.

.....................

ಅಧ್ಯಾಯ:7

# ಕ್ರಿಯಾಶೀಲರಾಗೋಣ ಬನ್ನಿ

**ಸು**ದೀರ್ಘವಾಗಿ ಈ ಘಟನೆಗಳನ್ನು ವಿವರಿಸಿರುವುದರ ಉದ್ದೇಶ ಗತ ಕಾಲದ ಸಂಭವಗಳನ್ನು ಮೆಲುಕು ಹಾಕುವುದಲ್ಲ. ಈ ಮೂಲಕ ನಾವು ತಿಳಿಯ ಪಡಿಸಬಯಸುವುದೇನೆಂದರೆ ಇಸ್ಲಾಮಿನ ಧಾರ್ಮಿಕ ಮತ್ತು ಲೌಕಿಕ ಶಕ್ತಿಯ ನೈಜ ಚೇತನ ಒಳಿತಿನೆಡೆಗೆ ಆಹ್ವಾನಿಸುವುದು, ಒಳಿತನ್ನು ಆಜ್ಞಾಪಿಸುವುದು ಮತ್ತು ಕೆಡುಕನ್ನು ತಡೆಯುವುದಾಗಿದೆ. ಅದರ ಮೇಲೆಯೇ ಇಸ್ಲಾಮಿನ ಜೀವನ ನೆಲೆನಿಂತಿದೆ. ಆ ಉದ್ದೇಶಕ್ಕಾಗಿಯೇ ಪ್ರವಾದಿ ಮುಹಮ್ಮದ್‌ರವರು(ಸ) ಮುಸ್ಲಿಮ್ ಸಮುದಾಯವನ್ನು ಕಟ್ಟಿ ಬೆಳೆಸಿದರು. ಸಂದೇಶವನ್ನು ತಲಪಬೇಕಾದವರಿಗೆ ತಲಪಿಸಲ್ಪಟ್ಟಾಗ ಮಾತ್ರವೇ ಅದು ಸಂದೇಶವೆನಿಸಿಕೊಳ್ಳುತ್ತದೆ. ಆದ್ದರಿಂದ ಸಂದೇಶ ಪ್ರಚಾರ ಇಸ್ಲಾಮಿನ ಸ್ವಭಾವದಲ್ಲೇ ಸೇರಿದೆ. ಇಸ್ಲಾಮ್ ಭೂಮುಖದಲ್ಲಿ ವಾಸಿಸುವ ಮಾನವ ಜೀವಿಗಳೆಲ್ಲರ ಪಾಲಿಗೆ ಬಂದಿರುವ ದಿವ್ಯ ಸಂದೇಶವಾಗಿದೆ. ಈ ದಿವ್ಯ ಅನುಗ್ರಹಗಳಿಂದ ಕೂಡಿದ ಸಂದೇಶ ಯಾರಿಗೆ ತಲಪಿತೋ, ಅವರ ಮೇಲೆ ಅದನ್ನು ಆದಷ್ಟು ಹೆಚ್ಚು ಜನರಿಗೆ ತಲಪಿಸಬೇಕಾದಂತಹ ಕರ್ತವ್ಯ ದೇವನವತಿಯಿಂದಲೇ ವಿಧಿಸಲ್ಪಟ್ಟಿದೆ. ಈ ವಾಸ್ತವಿಕತೆಯನ್ನೇ ಈ ಕೆಳಗಿನ ಸೂಕ್ತದಲ್ಲಿ ಸಾದರ ಪಡಿಸಲಾಗಿದೆ-

"ಮಾನವರ ಸನ್ಮಾರ್ಗದರ್ಶನ ಮತ್ತು ಸಂಸ್ಕಾರಗಳಿಗಾಗಿ ನಿಯೋಜಿಸಲಾಗಿರುವ ಅತ್ಯುತ್ತಮ ಜನಕೂಟವು ನಿಮ್ಮದಾಗಿರುತ್ತದೆ. ನೀವು ಒಳಿತಿನ ಆದೇಶವನ್ನೀಯುತ್ತೀರಿ ಮತ್ತು ಪಾಪಕಾರ್ಯಗಳಿಂದ ತಡೆಯುತ್ತೀರಿ. ಮತ್ತು ಅಲ್ಲಾಹನ ಮೇಲೆ ವಿಶ್ವಾಸವಿಡುತ್ತೀರಿ."

(ಆಲಿ ಇಮ್ರಾನ್- 110)

ಪ್ರಸ್ತುತ ಉದ್ದೇಶದ ಈಡೇರಿಕೆಗಾಗಿಯೇ ಅಲ್ಲಾಹನು ಮುಸ್ಲಿಮ್ ಸಮುದಾಯವನ್ನುಂಟು ಮಾಡಿದ್ದಾನೆ,

"ನಿಮ್ಮಲ್ಲಿ ಸತ್ಕರ್ಮಗಳ ಕಡೆಗೆ ಆಹ್ವಾನಿಸುವ, ಒಳಿತನ್ನು ಆಜ್ಞಾಪಿಸುವ ಮತ್ತು ಕೆಡುಕುಗಳಿಂದ ತಡೆಯುವಂತಹ ಜನಕೂಟವೊಂದು ಇರಬೇಕಾದುದು ಅತ್ಯಗತ್ಯ."

(ಆಲಿ ಇಮ್ರಾನ್- 104)

ಈ ಕರ್ತವ್ಯದ ಪ್ರಜ್ಞೆ ಇಸ್ಲಾಮಿನ ಕಳೆದ ಸಾವಿರದ ನಾನೂರು ವರ್ಷಗಳ ಇತಿಹಾಸದಲ್ಲಿ ಎಂತಹ ಆಶ್ಚರ್ಯಕರ ಚಮತ್ಕಾರಗಳನ್ನು ತೋರಿಸಿದೆ ಎಂಬುದರ ಸಂಕ್ಷಿಪ್ತ ಚಿತ್ರಣ ನಿಮ್ಮ ಮುಂದೆ ಬಂತು. ಈ ಕರ್ತವ್ಯದ ಪ್ರಜ್ಞೆಯಿದ್ದ ಮುಸ್ಲಿಮರು, "ಯುಕ್ತಿ ಮತ್ತು ಸದುಪದೇಶದ ಮೂಲಕ ನಿಮ್ಮ ಪ್ರಭುವಿನ ಮಾರ್ಗಕ್ಕೆ ಜನರನ್ನು ಆಹ್ವಾನಿಸಿರಿ." (ಅನ್ನಹ್ಲ್: 125) ಎಂಬ ದೇವಾಜ್ಞೆಯನ್ನು ಅನುಸರಿಸುತ್ತಾ ಕೇವಲ ಉಪದೇಶಗಳ ಬಲದಿಂದ ಹೇಗೆ ಲೋಕದಲ್ಲಿ ಇಸ್ಲಾಮಿಗೆ ವಿಜಯ ದೊರಕಿಸಿಕೊಟ್ಟರೆಂಬುದನ್ನು ಈ ಘಟನೆಗಳು ಸಾರಿ ಹೇಳುತ್ತವೆ. ಆಫ್ರಿಕಾದ ವಿಶಾಲ ಭೂಖಂಡದಲ್ಲಿ ಯಾವುದೇ ರೀತಿಯ ಒತ್ತಾಯ ಮತ್ತು ಆಮಿಷಗಳಿಲ್ಲದೆ,

ಮೋಸ ವಂಚನೆಯಿಲ್ಲದೆ ಕೋಟಿಗಟ್ಟಲೆ ಜನರು ಇಸ್ಲಾಮಿಗೆ ಪ್ರವೇಶಿಸಿದರು. ಚೀನಾದ
ಯಾವುದೇ ಆರ್ಥಿಕ ಬಲ ಅಥವಾ ಅಧಿಕಾರದ ಶಕ್ತಿಯಿಲ್ಲದೆ ಜನರು ಸಾಮೂಹಿಕವ
ಇಸ್ಲಾಮ್ ಸ್ವೀಕರಿಸಿದರು. ಮಲಾಯಾ ದ್ವೀಪದ ಶೇ. 80 ಜನಸಂಖ್ಯೆ ಯಾವುದೇ ರೀತಿ
ಅಧಿಕಾರವಿಲ್ಲದ ಅಮಾಯಕ ವ್ಯಾಪಾರಿಗಳ ಮೂಲಕ ಏಕದೇವೋಪಾಸಕರಾಗಿ ಮಾರ್ಪಟ್ಟ
ತಾರ್ತಾರಿಸ್ತಾನ್‌ನ ಮುಸ್ಲಿಮ್ ವಿರೋಧಿ ಕ್ರೂರ ಆಕ್ರಮಣಕಾರರನ್ನು ದುರ್ಬಲ ಮ
ಕೋಮಲಾಂಗನೆಯರಾದ ಮಹಿಳೆಯರು ಹಾಗೂ ಬಲಹೀನರಾದ ಸಂತರು ಇಸ್ಲಾಮಿ
ಕರುಣಾ ವ್ಯವಸ್ಥೆಯ ಮುಂದೆ ಶಿರಬಾಗಿಸುವಂತೆ ಮಾಡಿದರು. ಈ ಎಲ್ಲಾ ಪಾಠಬೋಧ
ಘಟನಾವಳಿಗಳನ್ನು ನಾವು ಸಮುದಾಯ ಬಾಂಧವರ ಮುಂದಿಟ್ಟಿರುವುದರ ಉದ್ದೇಶ ಸಂದೇ
ಪ್ರಚಾರಾಸಕ್ತಿ ಎಂತೆಂತಹ ಚಮತ್ಕಾರಗಳನ್ನು ಮಾಡಿದೆ ಎಂಬುದರ ಅರಿವು ಮೂಡಿಸುವುದಕ್ಕಾಗಿ
ಈ ಮೂಲಕ ಮುಸ್ಲಿಮ್ ಸಮುದಾಯದಲ್ಲೂ ಇಂತಹ ಜಾಗೃತಿ ಮೂಡಬೇಕೆಂಬುದು ನವ
ಉದ್ದೇಶವಾಗಿದೆ.

## ಕ್ರಿ.ಶ. 1857ರ ನಂತರದ ಸಂದೇಶ ಪ್ರಚಾರ ಚಟುವಟಿಕೆಗಳು

ಕ್ರಿ.ಶ. 1857ರ ವಿಫಲ ಸ್ವಾತಂತ್ರ್ಯ ಸಂಗ್ರಾಮದ ಕಾಲದಲ್ಲಿ ಭಾರತದ ಮುಸ್ಲಿಮ
ಇಸ್ಲಾಮೀ ಸ್ವಾಭಿಮಾನ ತೀವ್ರವಾಗಿ ಘಾಸಿಗೊಂಡಿತು. ಅದರ ನಿಮಿತ್ತ ಮುಸ್ಲಿಮರಲ್ಲಿ ಸ್ವ
ಕಾಲದ ತನಕ ಧಾರ್ಮಿಕ ಜಾಗೃತಿ ಮೂಡಿತು ಮತ್ತು ಕ್ರಿ.ಶ. 1857ರ ನಂತರ ಸುಮಾ
40 ವರ್ಷಗಳ ತನಕ ಇಸ್ಲಾಮಿನ ಸಂದೇಶ ಪ್ರಚಾರದ ಕೆಲಸ ತೀವ್ರವಾಗಿ ನಡೆಯಿತು. ಆದ
ದುರದೃಷ್ಟವಶಾತ್ ಸತ್ಯನಿಷೇಧಿಗಳ ಉಪಟಳದಿಂದಾಗಿ ಈ ಧಾರ್ಮಿಕ ಉತ್ಸಾಹ ಮತ
ಸಂದೇಶ ಪ್ರಚಾರಾಸಕ್ತಿ ಕ್ರಮೇಣ ಕೊನೆಗೊಂಡಿತು. ಆ ಕಾಲದಲ್ಲಿ ಮೂಡಿದ್ದ ಧರ್ಮ
ಸೇವಾಸಕ್ತಿ ಪರಸ್ಪರರ ವಿರುದ್ಧ ಸತ್ಯನಿಷೇಧದ ಆರೋಪ ಹೊರಿಸಲು ಹಾಗೂ ಪರಸ್ಪರ ಜಗ
ಮತ್ತು ಕ್ಷೋಭೆಯನ್ನುಂಟು ಮಾಡಲು ಉಪಯೋಗವಾಗತೊಡಗಿತು. ಹತ್ತೊಂಭತ್ತ
ಶತಮಾನದ ಉತ್ತರಾರ್ಧದಲ್ಲಿ ಮುಸ್ಲಿಮರ ಜನಸಂಖ್ಯಾ ವೃದ್ಧಿಯನ್ನು ಕಂಡಾ
ಆಶ್ಚರ್ಯಪಡಬೇಕಾಗುತ್ತದೆ. ಆಗ ಮುಸ್ಲಿಮರ ನಡುವೆ ಯಾವುದೇ ವ್ಯವಸ್ಥಿತ ಧರ್ಮ ಪ್ರಚಾ
ವ್ಯವಸ್ಥೆ ಅಸ್ತಿತ್ವದಲ್ಲಿರಲಿಲ್ಲ. ಅದರ ಹೊರತಾಗಿಯೂ ನವಮುಸ್ಲಿಮರ ಸಂಖ್ಯೆ ಪ್ರತಿವರ್ಷ
ಹತ್ತು ಸಾವಿರದಿಂದ ಹಿಡಿದು ಆರು ಲಕ್ಷದ ತನಕ ವರ್ಧಿಸುತ್ತಿತ್ತು. ಆ ಕಾಲದ
ಧರ್ಮೋಪದೇಶವನ್ನೇ ತಮ್ಮ ಜೀವನದ ಗುರಿಯನ್ನಾಗಿ ಅಂಗೀಕರಿಸಿದ ಅನೇಕ ವಿದ್ವಾಂಸ
ಮತ್ತು ವಾಗ್ಮಿಗಳು ಇದ್ದರು. ಅವರು ವೈಯಕ್ತಿಕವಾಗಿ ಊರೂರು ಸುತ್ತಾಡಿ ನೂರಾರು ಜನ
ಇಸ್ಲಾಮ್ ಸ್ವೀಕರಿಸುವಂತೆ ಮಾಡುತ್ತಿದ್ದರು. ಅಲ್ಲದೆ ವ್ಯಾಪಾರ ಇತ್ಯಾದಿಗಳನ್ನು ನಡೆಸು
ಸಾಮಾನ್ಯ ಮುಸ್ಲಿಮರಲ್ಲೂ ಸಂದೇಶ ಪ್ರಚಾರಾಸಕ್ತಿ ವ್ಯಾಪಕವಾಗಿತ್ತು. ಕಛೇರಿಯಲ್ಲಿ ಕೆಲ
ಮಾಡುವ ನೌಕರರು ಮತ್ತು ಸಾಮಾನ್ಯ ಅಂಗಡಿ ಮಾಲಕರು ಕೂಡಾ ಇಸ್ಲಾಮಿನ ಪ್ರಚಾ
ಕಾರ್ಯ ಕೈಗೊಳ್ಳುತ್ತಿದ್ದರು. ಆದ್ದರಿಂದ 'ಅಂಜುಮನ್- ಹಿಮಾಯತುಲ್ ಇಸ್ಲಾಮ್'
'ಲಾಹೋರ್, ಪಾಕಿಸ್ತಾನ್' ಹಳೇ ವರದಿಗಳನ್ನು ಓದಿದರೆ ಶಾಲಾ ಶಿಕ್ಷಕರು, ಸರಕಾ

ಕಛೇರಿಗಳ ನೌಕರರು, ಸಣ್ಣ ಪುಟ್ಟ ವ್ಯಾಪಾರಿಗಳು, ಹೆಚ್ಚೇಕೆ ಒಂಟೆಯ ಗಾಡಿ ನಡೆಸುವ ವ್ಯಕ್ತಿಗಳೂ ಧರ್ಮ ಪ್ರಚಾರ ನಡೆಸುವ ನಿದರ್ಶನಗಳು ಕಂಡು ಬರುತ್ತವೆ.

## ಆದರೆ ಈಗ

ಇಂದು ಇಸ್ಲಾಮಿನ ಪ್ರಚಾರ ಕಾರ್ಯ ಕುಂಠಿತಗೊಂಡಿದೆ. ನಮ್ಮ ನಿರ್ಲಕ್ಷ್ಯ, ಧಾರ್ಮಿಕ ಅಶ್ರದ್ಧೆಗಳೇ ಮುಖ್ಯ ಕಾರಣವೆಂದು ನಮಗೆ ಕಂಡು ಬರುತ್ತದೆ. ಅನ್ಯಥಾ ಇಸ್ಲಾಮ್ ಇಂದಿಗೂ ಮೊದಲಿನಂತೆಯೇ ಇದೆ. ಅದರ ಸ್ವಭಾವದಲ್ಲಿ ಯಾವುದೇ ಬದಲಾವಣೆಯಾಗಿಲ್ಲ. ಅದು ಸಾಧ್ಯವೂ ಅಲ್ಲ. ಆದರೆ ನಾವು ಬದಲಾಗಿದ್ದೇವೆ. ನಮ್ಮ ಜೀವನ ಬದಲಾಗಿದೆ. ನಮ್ಮ ಭಾವನೆ ಮತ್ತು ಆಸಕ್ತಿಗಳು ಬದಲಾಗಿವೆ. ಇಂದಿನ ಪತನಕ್ಕೆ ಇರುವ ಮುಖ್ಯ ಕಾರಣಗಳು ಇದುವೇ ಆಗಿದೆ. ಭಾರತದಲ್ಲಿ ಇಸ್ಲಾಮಿನ ಪ್ರಚಾರಕಾರ್ಯದ ಪ್ರಶ್ನೆ ಇಂದು ಸೂಕ್ಷ್ಮ ಘಟ್ಟವನ್ನು ತಲುಪಿದೆ. ಆದರೆ ಸಮ್ಮೇಳನಗಳ ಮೇಲೆ ಸಮ್ಮೇಳನಗಳನ್ನು ನಡೆಸುವುದು, ಸಂಸ್ಥೆಗಳ ಮೇಲೆ ಸಂಸ್ಥೆಗಳನ್ನು ಕಟ್ಟುವುದು, ಅನೇಕ ಪತ್ರಿಕೆಗಳನ್ನು ಪ್ರಕಟಗೊಳಿಸುವುದು ಅಥವಾ ಸದ್ದುಗದ್ದಲವೆಬ್ಬಿಸಿ ಕಾಲಹರಣ ಮಾಡುವುದು ಇದಕ್ಕಿರುವ ಪರಿಹಾರವಲ್ಲ. ಬದಲಾಗಿ ಮುಸ್ಲಿಮರನ್ನು ನೈಜ ಮುಸ್ಲಿಮರನ್ನಾಗಿ ಮಾಡುವುದು, ಅವರಲ್ಲಿ ನೈಜ ಇಸ್ಲಾಮೀ ಸ್ಫೂರ್ತಿಯನ್ನು ಬೆಳೆಸುವುದು, ಅವರ ಜೀವನವನ್ನು ನೈಜ ಇಸ್ಲಾಮೀ ಜೀವನಕ್ಕೆ ಬದ್ಧಗೊಳಿಸುವುದು, ಅವರಿಂದ ಶತಮಾನಗಳ ಕಾಲ ಬಹುದೇವಾರಾಧಕ ಸಮುದಾಯದೊಂದಿಗೆ ಬಾಳಿರುವುದರಿಂದ ಹುಟ್ಟಿಕೊಂಡ ಎಲ್ಲಾ ವಿಧದ ಧರ್ಮಬಾಹಿರ ವಿಶ್ವಾಸ, ನವೀನಾಚಾರ ಮತ್ತು ಕೆಟ್ಟ ಪ್ರವೃತ್ತಿಗಳನ್ನು ದೂರೀಕರಿಸುವುದು ಮತ್ತು ಪ್ರತಿಯೊಬ್ಬ ಮುಸ್ಲಿಮನನ್ನೂ ಧರ್ಮದ ಸಕ್ರಿಯ ಉಪದೇಶಕನನ್ನಾಗಿ ಮಾಡುವ ಧಾರ್ಮಿಕ ಪ್ರಜ್ಞೆಯನ್ನು ಅವರಲ್ಲಿ ಬೆಳೆಸುವುದು ಇದಕ್ಕಿರುವ ಪರಿಹಾರವಾಗಿದೆ.

ಮುಸ್ಲಿಮರು, ಕ್ರೈಸ್ತ ಮಿಶನರಿಗಳಂತೆ ಸಂಸ್ಥೆಗಳನ್ನು ಕಟ್ಟಿ ಕಾರ್ಯಪ್ರವೃತ್ತರಾಗಲಿಲ್ಲ ಎಂಬ ವಾಸ್ತವಿಕತೆಯನ್ನು ಅನೇಕ ಬಾರಿ ನಾವು ಒತ್ತುಕೊಟ್ಟು ಪ್ರಸ್ತಾವಿಸಿದ್ದೇವೆ. ಇದರರ್ಥ ನಾವು ಸಂಘಟಿತರಾಗಿ ಕೆಲಸ ಮಾಡುವುದನ್ನು ವಿರೋಧಿಸುತ್ತೇವೆ ಎಂದಲ್ಲ. ಆದರೆ ಈ ಕೆಲಸ ಯಾವುದೇ ಒಂದು ಸಮೂಹದ ಅಥವಾ ಕೆಲವು ಸಮೂಹಗಳ ಕೆಲಸವಲ್ಲ. ಅದು ಮುಸ್ಲಿಮರಲ್ಲಿ ಸಾರ್ವತ್ರಿಕ ಧರ್ಮ ಪ್ರಚಾರಾಸಕ್ತಿಯನ್ನು ಬಯಸುತ್ತದೆ. ಅದಕ್ಕಾಗಿ ಪ್ರತಿಯೊಬ್ಬ ಮುಸ್ಲಿಮನೂ ತಾನು ಈ ಕೆಲಸಕ್ಕಾಗಿ ನಿಯೋಜಿಸಲ್ಪಟ್ಟವನು ಎಂದು ಭಾವಿಸಬೇಕಾಗಿದೆ.

## ಧರ್ಮ ಪ್ರಚಾರಕ ಸಮೂಹಗಳು ಅಥವಾ ಸಾರ್ವತ್ರಿಕ ಸಂದೇಶ ಪ್ರಚಾರಾಸಕ್ತಿ

ಸಾಮಾನ್ಯ ಮುಸ್ಲಿಮರು ಧರ್ಮ ಪ್ರಚಾರಾಸಕ್ತಿಯಿಂದ ಮುಕ್ತರಾಗಿದ್ದು, ಕೇವಲ ಒಂದು ಸಂಘ ಅಥವಾ ಕೆಲವು ಸಂಘಸಂಸ್ಥೆಗಳಿಗೆ ಈ ಹೊಣೆಗಾರಿಕೆಯನ್ನು ವಹಿಸಿಕೊಡಲಾದರೆ ಮುಸ್ಲಿಮೇತರರ ವಿರುದ್ಧ ನಮಗೆ ಜಯಗಳಿಸಲು ಸಾಧ್ಯವಿಲ್ಲ. ಏಕೆಂದರೆ ಎಲ್ಲೆಡೆಯೂ

ಮುಸ್ಲಿಮರ ಸಂದೇಶ ಪ್ರಚಾರಾಸಕ್ತಿಯೇ ಅವರಿಗೆ ಜಯ ದೊರಕಿಸಿಕೊಟ್ಟಿದೆ. ಆಫ್ರಿಕಾ ಮುಸ್ಲಿಮರಲ್ಲಿ ಈ ಸಾರ್ವತ್ರಿಕ ಆಸಕ್ತಿ ಇಲ್ಲದಿರುತ್ತಿದ್ದರೆ ಮತ್ತು ಕೆಲವು ಸಂಸ್ಥೆಗಳೇ ಸಂದೇಶ ಪ್ರಚಾರದ-ಕರ್ತವ್ಯವನ್ನು ನಿಭಾಯಿಸಲು ಸಾಕೆಂದು ಪರಿಗಣಿಸಲಾಗಿದ್ದರೆ, ಕ್ರೈಸ್ತ ಮಿಶನರಿಗಳ ವಿರುದ್ಧ ಜಯಗಳಿಸಲು ಪ್ರಳಯ ಕಾಲದ ತನಕ ಅವರಿಗೆ ಸಾಧ್ಯವಾಗುತ್ತಿರಲಿಲ್ಲ. ಏಕೆಂದರೆ ಮುಸ್ಲಿಮರಿಗೆ ಹೋಲಿಸಿದರೆ ಕ್ರೈಸ್ತ ಸಂಸ್ಥೆಗಳು ಅತ್ಯಂತ ಶಕ್ತಿಶಾಲಿ ಮತ್ತು ಸಿರಿವಂತ ಸಂಸ್ಥೆಗಳಾಗಿದ್ದುವು. ಆದರೆ ಮುಸ್ಲಿಮರ ಸಾರ್ವತ್ರಿಕ ಸಂದೇಶ ಪ್ರಚಾರಾಸಕ್ತಿಯಿಂದಾಗಿ ಅವರಿಗೆ ದೊರೆತ ವಿಜಯವನ್ನು ಕಂಡು ಕ್ರೈಸ್ತ ಜಗತ್ತು ಇಂದಿಗೂ ನಿಬ್ಬೆರಗಾಗುತ್ತದೆ. ಹಾಗೆಯೇ ಮಲಾಯಾ ದ್ವೀಪ ಸಮುಚ್ಚಯದಲ್ಲಿ ಸಾಮಾನ್ಯ ವ್ಯಾಪಾರಿಗಳು ಮತ್ತು ಯಾತ್ರಿಕರಲ್ಲಿ ಧರ್ಮ ಸೇವಾಸಕ್ತಿ ಇಲ್ಲದಿರುತ್ತಿದ್ದರೆ ಮತ್ತು ಅಲ್ಲಿ ಆಗಾಗ ತಲಪುತ್ತಿದ್ದ ಅರೇಬಿಯಾ ಮತ್ತು ಭಾರತದ ವಾಗ್ಮಿಗಳು ಮತ್ತು ವಿದ್ವಾಂಸರು ಮಾತ್ರ ಈ ಕರ್ತವ್ಯವನ್ನು ನಿಭಾಯಿಸುತ್ತಿದ್ದರೆ, ಇಂದು ಶಾಂತ ಸಾಗರದ ತೀರಗಳಲ್ಲಿ ಅದಾನ್ ಕರೆ ಕೇಳಿ ಬರುತ್ತಿರಲಿಲ್ಲ. ಕ್ರೈಸ್ತ ಸಾಮ್ರಾಜ್ಯಶಾಹಿಗಳು ಮತ್ತು ಮೂರ್ತಿಪೂಜಕರ ಸಂಯುಕ್ತ ಪ್ರತಿರೋಧದ ಹೊರತಾಗಿಯೂ ಇಂದಿಗೂ ಆ ಪ್ರದೇಶಗಳಲ್ಲಿ ಅದಾನ್ ಕರೆ ಮೊಳಗಲು ಕಾರಣ ಆ ಪ್ರದೇಶದ ಜನರಲ್ಲಿದ್ದ ಸಾರ್ವತ್ರಿಕ ಧರ್ಮ ಪ್ರಚಾರಾಸಕ್ತಿಯೇ ಆಗಿದೆ. ಇಸ್ಲಾಮಿನ ಸಂದೇಶ ಪ್ರಚಾರ ಶರೀಅತ್‌ನ ದೃಷ್ಟಿಯಲ್ಲಿ ಎಲ್ಲರ ವತಿಯಿಂದ ಕೆಲವರು ನೆರವೇರಿಸಿದರೆ ಪರ್ಯಾಪ್ತವಾಗುವ ಸಾಮೂಹಿಕ ಕರ್ಮ (ಫರ್ಝೆ ಕಿಫಾಯಃ) ಎಂಬುದು ಸರಿ. ಆದರೆ ಶರೀಅತ್‌ನಲ್ಲಿ ಈ ವಿನಾಯಿತಿ ನೀಡಲಾಗಿರುವುದು ಮುಸ್ಲಿಮರಿಗೆ ಸೌಲಭ್ಯ ಕಲ್ಪಿಸುವ ಉದ್ದೇಶದಿಂದಲೇ ಹೊರತು ಅವರನ್ನು ಕರ್ತವ್ಯ ಮುಕ್ತಗೊಳಿಸಲಿಕ್ಕಾಗಿ ಅಥವಾ ಅದರ ಬಗ್ಗೆ ತೀರಾ ಅಶ್ರದ್ಧರಾಗಿ ಮಾಡಿಬಿಡಲಿಕ್ಕಾಗಿಯಲ್ಲ. ಈ ವಿನಾಯಿತಿಯ ನಿಜವಾದ ಅರ್ಥವೇನೆಂದರೆ- ಇದು ಎಲ್ಲಾ ಮುಸ್ಲಿಮರಿಗೆ ಅನ್ವಯವಾಗುವ ಕರ್ತವ್ಯವಾಗಿದೆ. ಅದನ್ನು ಎಲ್ಲರೂ ನೆರವೇರಿಸಬೇಕು. ಆದರೆ ಮುಸ್ಲಿಮರಲ್ಲಿ ಈ ಕರ್ತವ್ಯವನ್ನು ಕಟ್ಟುನಿಟ್ಟಾಗಿ ಈಡೇರಿಸುವ ಸಮೂಹವೊಂದು ಅಸ್ತಿತ್ವದಲ್ಲಿರಬೇಕಾಗುವುದು ಅದರ ಕನಿಷ್ಠ ಬೇಡಿಕೆಯಾಗಿದೆ. ಆ ಸಮೂಹ ವಿದ್ವಾಂಸರು ಮತ್ತು ಸುಧಾರಕರಿಂದ ಕೂಡಿರಬೇಕಾಗಿದೆ.

ನಮ್ಮ ದೃಷ್ಟಿಯಲ್ಲಿ ಇಸ್ಲಾಮಿನ ಸಂದೇಶ ಪ್ರಚಾರದ ಅತ್ಯುತ್ತಮ ವಿಧಾನವೇನೆಂದರೆ, ನಾವು ಮುಸ್ಲಿಮೇತರರನ್ನು ಅಭಿಸಂಬೋಧಿಸುವ ಬದಲು ಮುಸ್ಲಿಮರನ್ನು ಮೊದಲು ಅಭಿಸಂಬೋಧಿಸಬೇಕಾಗಿದೆ. ಪ್ರತಿಯೊಬ್ಬ ಮುಸ್ಲಿಮನೂ ಧರ್ಮ ಪ್ರಚಾರಕನಾಗಿ ಬಿಡುವಂತಹ ಧಾರ್ಮಿಕ ಸ್ಫೂರ್ತಿಯನ್ನು ನಾವು ಅವರಲ್ಲಿ ತುಂಬಬೇಕಾಗಿದೆ. ಇದರಿಂದ ಧರ್ಮ ಪ್ರಚಾರದ ಕರ್ತವ್ಯವೂ ಅತ್ಯುತ್ತಮ ರೀತಿಯಲ್ಲಿ ನೆರವೇರಿಸಲ್ಪಡುವುದರ ಜತೆಗೆ ಸಮುದಾಯವನ್ನು ಬಾಧಿಸಿರುವ ಧರ್ಮಕ್ಕೆ ಸಂಬಂಧಿಸಿದ ನೂರಾರು ಕಾಯಿಲೆಗಳೂ ತನ್ನಷ್ಟಕ್ಕೆ ಗುಣವಾಗುತ್ತದೆ.

## ವರ್ತಮಾನ ಸ್ಥಿತಿಯ ಬದಲಾವಣೆಗೆ ಸುಧಾರಣೋಪಾಯಗಳು

ಇತರ ದೇಶಗಳ ಸಂದೇಶ ಪ್ರಚಾರದ ಅನುಭವಗಳ ಹಿನ್ನೆಲೆಯಲ್ಲಿ ಇಸ್ಲಾಮಿನ ಪ್ರಚಾರಕ್ಕೆ ಬೇಕಾದ ಅನೇಕ ಸುಧಾರಣೋಪಾಯಗಳ ಪೈಕಿ ಸೂಕ್ತವೆಂದು ಕಂಡು ಬರುವ ಕೆಲವನ್ನು ನಾವಿಲ್ಲಿ ನಮೂದಿಸುತ್ತೇವೆ. ಸಮುದಾಯದ ನಾಯಕರು ಇದರ ಬಗ್ಗೆ ಗಮನ ಹರಿಸುವರೆಂದು ಭಾವಿಸುತ್ತೇನೆ.

### 1. ಜಾತಿ ಪದ್ಧತಿ ಮತ್ತು ಅಸಮಾನತೆಯನ್ನು ಅಳಿಸುವುದು

ಮುಸ್ಲಿಮರಲ್ಲಿ ಹಿಂದೂಗಳ ಒಡನಾಟದಿಂದಾಗಿ ಬೆಳೆದು ಬಂದಿರುವ ಜಾತಿ ಆಧಾರಿತ ತಾರತಮ್ಯವನ್ನು ಕೊನೆಗೊಳಿಸಬೇಕು. ಯಾವ ವ್ಯಕ್ತಿಯೂ ಹುಟ್ಟಿನ ಆಧಾರದಲ್ಲಿ ಮಲಿನ ಅಥವಾ ಮ್ಲೇಚ್ಛನಲ್ಲ ಎಂಬ ಇಸ್ಲಾಮಿನ ಕಲ್ಪನೆ, ಅದರ ವಿಜಯದಲ್ಲಿ ಸದಾ ಮಹತ್ತರವಾದ ಪಾತ್ರವಹಿಸಿದೆ. ಇದನ್ನು ನಮ್ಮೆಲ್ಲಾ ವ್ಯವಹಾರಗಳ ವೇಳೆ ಪ್ರಧಾನ ಸೂತ್ರವನ್ನಾಗಿ ಅಂಗೀಕರಿಸಿಕೊಳ್ಳಬೇಕಾಗಿದೆ.

### 2. ವಂಶೀಯ ಪಕ್ಷಪಾತವನ್ನು ಕೊನೆಗೊಳಿಸುವುದು

ನಮ್ಮಲ್ಲಿ ಸಾಮಾನ್ಯವಾಗಿ ನವ ಮುಸ್ಲಿಮರನ್ನು ಜನ್ಮತಃ ಮುಸ್ಲಿಮರಾಗಿರುವವರಿಗಿಂತ ವಂಶದಲ್ಲಿ ಕೀಳಾದವರೆಂದು ಭಾವಿಸಲಾಗುತ್ತದೆ. ಈ ಇಸ್ಲಾಮೇತರ ವಿಶ್ವಾಸವನ್ನು ತೀವ್ರವಾಗಿ ವಿರೋಧಿಸಬೇಕು ಮತ್ತು ನವಮುಸ್ಲಿಮ್ ಸ್ತ್ರೀ-ಪುರುಷರೊಂದಿಗೆ ವಿವಾಹ ಸಂಬಂಧವನ್ನು ಸ್ಥಾಪಿಸುವ ಪದ್ಧತಿ ಪುನಃ ಜಾರಿಗೊಳ್ಳಬೇಕು. ನಮ್ಮಲ್ಲಿನ ಗಣ್ಯರೆಂದು ಪರಿಗಣಿಸಲ್ಪಡುವ ವ್ಯಕ್ತಿಗಳು ಸಾಮಾನ್ಯವಾಗಿ ಅದರಿಂದ ದೂರನಿಲ್ಲುತ್ತಾರೆ. ಆದರೆ ನಮ್ಮ ಪೈಕಿ ಯಾವ ಗಣ್ಯ ವ್ಯಕ್ತಿಗಳೂ ಪ್ರವಾದಿ ಮುಹಮ್ಮದ್‌ರಿಗಿಂತ(ಸ) ಗಣ್ಯ ಸ್ಥಾನಕ್ಕೆ ತಲಪಲು ಸಾಧ್ಯವಿಲ್ಲ ಮತ್ತು ಪ್ರವಾದಿವರ್ಯರು(ಸ) ನವ ಮುಸ್ಲಿಮರಾದ ಅಬೂ ಬಕರ್ ಸಿದ್ದೀಕ್(ರ) ಮತ್ತು ಉಮರ್ ಫಾರೂಕ್‌ರ(ರ) ಪುತ್ರಿಯರನ್ನು ವಿವಾಹವಾಗಿದ್ದರು ಹಾಗೂ ನವ ಮುಸ್ಲಿಮರಾದ ಹ.ಉಸ್ಮಾನ್(ರ) ಮತ್ತು ಹ. ಅಲೀಯವರಿಗೆ(ರ) ತಮ್ಮ ಪುತ್ರಿಯರನ್ನು ವಿವಾಹ ಮಾಡಿಸಿದ್ದರು.

### 3. ಇಸ್ಲಾಮೀ ಸೋದರತೆಯನ್ನು ಬೆಳೆಸುವುದು

ಮುಸ್ಲಿಮರು ತಮ್ಮಲ್ಲಿ ಇಸ್ಲಾಮೀ ಭ್ರಾತೃತ್ವದ ಭಾವನೆಯನ್ನು ಬೆಳೆಸಬೇಕಾಗಿದೆ. ಇದರಿಂದ ಮುಸ್ಲಿಮೇತರರಿಗೆ ಇಸ್ಲಾಮೀ ಭ್ರಾತೃತ್ವದಲ್ಲಿ ಸೇರುವ ಆಸಕ್ತಿ ಬೆಳೆಯುವ ಸಾಧ್ಯತೆಯಿದೆ.

## 4 ಧಾರ್ಮಿಕ ಮತ್ತು ನೈತಿಕ ಮಟ್ಟದ ಸಾರ್ವತ್ರಿಕ ಸುಧಾರಣೆ

ಮುಸ್ಲಿಮರ ಆಂತರಿಕ ಜೀವನದ ಸುಧಾರಣೆಗೆ ಬಹುಶಃ ಒಂದು ಆಂದೋಲನವೇ ಬೇಕಾಗಿ ಬರಬಹುದು. ಆದ್ದರಿಂದ ಮುಸ್ಲಿಮೇತರ ಸಮೂಹಗಳನ್ನು ಸೆಳೆಯುವಂತಹ ಆಕರ್ಷಣೀಯತೆಯನ್ನು ಕನಿಷ್ಠ ಅವರ ಬಾಹ್ಯ ಜೀವನದಲ್ಲಾದರೂ ಬೆಳೆಸಲು ಪ್ರಯತ್ನಿಸಬೇಕಾಗಿದೆ. ಉದಾಹರಣೆಗೆ ಸಾಮೂಹಿಕ ನಮಾಝಿನ ಪಾಲನೆ, ಉಪವಾಸ ವ್ರತದ ಬಗ್ಗೆ ಕಟ್ಟುನಿಟ್ಟು, ಬಹುದೇವಾರಾಧನೆಯ ಸೋಂಕು ಬರುವಂತಹ ನವೀನಾಚಾರಗಳಿಂದ ದೂರನಿಲ್ಲುವುದು, ಧರ್ಮ ನಿಷಿದ್ಧ ವಸ್ತುಗಳನ್ನು ವರ್ಜಿಸುವುದು ಮುಂತಾದವುಗಳ ಕುರಿತು ಸಾರ್ವತ್ರಿಕ ಉಪದೇಶ ನೀಡಲ್ಪಡಬೇಕು. ಮುಸ್ಲಿಮರಲ್ಲಿ ನೈತಿಕ ಅಪರಾಧಗಳು ಸಂಪೂರ್ಣ ಕೊನೆಗೊಳ್ಳುವಂತಾಗಲು ನಾವು ಪ್ರಯತ್ನಿಸಬೇಕು. ಏಕೆಂದರೆ ಮುಸ್ಲಿಮರ ನೈತಿಕ ಮಟ್ಟ ಉನ್ನತಗೊಂಡಾಗ ಮುಸ್ಲಿಮೇತರರ ಹೃದಯದಲ್ಲಿ ಅವರ ಬಗ್ಗೆ ಗೌರವ ಮೂಡುತ್ತದೆ.

## 5. ಧಾರ್ಮಿಕ ವಿಧಿಗಳ ಬೋಧನೆ ಮತ್ತು ಸಂದೇಶ ಪ್ರಚಾರಕ ಚಟುವಟಿಕೆಗಳ ಆಂದೋಲನ

ಶುಕ್ರವಾರದ ಪ್ರವಚನಗಳು, ರಾತ್ರಿ ಸಭೆ ಮತ್ತು ತರಗತಿಗಳು ಹಾಗೂ ಪತ್ರಿಕೆಗಳ ಮೂಲಕ ಮುಸ್ಲಿಮರಿಗೆ ಅವರ ಧಾರ್ಮಿಕ ವಿಧಿಗಳ ಬೋಧನೆ ನೀಡಬೇಕು. ಧರ್ಮಗಳ ತುಲನಾತ್ಮಕ ಅಧ್ಯಯನದ ಸಾಮಾನ್ಯ ಚರ್ಚೆಗಳನ್ನು ವಿಶದಾಂಶಗಳೊಂದಿಗೆ ಅವರಿಗೆ ತಿಳಿಯ ಪಡಿಸಬೇಕು. ತನ್ಮೂಲಕ ಅವರಲ್ಲಿ ಸಂದೇಶ ಪ್ರಚಾರದ ಆಸಕ್ತಿಯನ್ನು ಬೆಳೆಸಬೇಕು. ವಿಶೇಷವಾಗಿ ಶಾಲಾ ಶಿಕ್ಷಕರು, ಸರಕಾರಿ ಇಲಾಖೆಗಳ ನೌಕರರು ಹಾಗೂ ವ್ಯಾಪಾರಿ ವರ್ಗದಲ್ಲಿ ಈ ಬಗ್ಗೆ ಆಂದೋಲನವನ್ನು ನಡೆಸುವುದು ಅತ್ಯುಪಯುಕ್ತವಾಗಿದೆ. ಏಕೆಂದರೆ ಅವರಿಗೆ ಜನಸಂಪರ್ಕದ ಅವಕಾಶಗಳು ಹೆಚ್ಚಿರುತ್ತವೆ ಮತ್ತು ಅವರು ಅತ್ಯಂತ ಯಶಸ್ವಿ ರೀತಿಯಲ್ಲಿ ಸಂದೇಶ ಪ್ರಚಾರದ ಕೆಲಸ ಮಾಡಬಹುದಾಗಿದೆ.

....................

# ಉಪಸಂಹಾರ

ಇದೊಂದು ಮಹತ್ತರವಾದ ಕೆಲಸವಾಗಿದ್ದು ಇದಕ್ಕಾಗಿ ನಮ್ಮ ವಿದ್ವಾಂಸರು ಮತ್ತು ಫಿ ಸಂತರ ಉತ್ತರಾಧಿಕಾರಿಗಳು ತಮ್ಮ ಕುಟೀರಗಳಿಂದ ಹೊರ ಬರಬೇಕಾಗಿದೆ. ್ವಾಂಸರಿಗೆ ಭಯಭಕ್ತಿಯುಳ್ಳವರು (ಪವಿತ್ರ ಕುರ್‌ಆನ್‌ನಲ್ಲಿ ವಿದ್ವಾಂಸರ ಕುರಿತು, ಸ್ತವದಲ್ಲಿ ಅಲ್ಲಾಹನ ದಾಸರಲ್ಲಿ ಜ್ಞಾನವುಳ್ಳವರು(ವಿದ್ವಾಂಸರು) ಮಾತ್ರ ಅವನನ್ನು ರುಪಡುತ್ತಾರೆ" ಎಂದು ಹೇಳಲಾಗಿದೆ.) 'ಪ್ರವಾದಿಗಳ ವಾರೀಸುದಾರರು' ಮುಂತಾದ ನವನ್ನು ವೃಥಾ ನೀಡಿಲ್ಲ. ಬದಲಾಗಿ ಸಮುದಾಯದ ಸುಧಾರಣೆ ಮತ್ತು ಮಾರ್ಗದರ್ಶನದ ಹತ್ತರ ಹೊಣೆಗಾರಿಕೆಯನ್ನು ಅವರಿಗೆ ವಹಿಸಿಕೊಡಲಾಗಿದೆ. ಅದನ್ನು ನಿಭಾಯಿಸುವ ಕ್ಕಿನಲ್ಲಿ ಅವರು ಕಿಂಚಿತ್ತಾದರೂ ಅಸಡ್ಡೆ ತೋರಿದರೆ ದೇವನ ಕಠಿಣ ಹಿಡಿತದಿಂದ ್ಪಿಸಿಕೊಳ್ಳಲು ಸಾಧ್ಯವಿಲ್ಲ. ಹಾಗೆಯೇ ಸೂಫಿಸಂತರಿಗೂ ನಾವು ಅವರ ಹೊಣೆಗಾರಿಕೆಯನ್ನು ನೆಪಿಸುತ್ತೇವೆ. ಅವರು ಅಲಂಕರಿಸಿರುವ ಪೀಠಗಳು, ಮಾರ್ಗದರ್ಶನ ಮತ್ತು ಉಪದೇಶದ ಠಗಳಾಗಿವೆ. ಸೂಫಿ ಸಂತರ ಉತ್ತರಾಧಿಕಾರವನ್ನು ವಹಿಸುವವರಿಗೆ ಕೆಲವು ಶ್ರೇಷ್ಠತೆ ಮತ್ತು ೌಕಿಕ ಲಾಭಗಳು ಮಾತ್ರವಿರುವುದಲ್ಲ, ಅದರ ಜತೆಗೆ ಅವರಿಗೆ ಅನೇಕ ಹೊಣೆಗಾರಿಕೆ ಮತ್ತು ವಾಬ್ದಾರಿಕೆಗಳೂ ಇದೆ. ಈ ಹೊಣೆಗಾರಿಕೆಯಿಂದಾಗಿಯೇ ಸೂಫಿಗಳು ತಮ್ಮ ೀವನವನ್ನು ಇಸ್ಲಾಮಿನ ಸೇವೆಗೆ ಮುಡಿಪಾಗಿಟ್ಟರು. ಯಾವುದೇ ಮುಸ್ಲಿಮನಿಂದ ಹಸ್ತ ್ರಮಾಣವಚನ ಪಡೆದ ನಂತರ, ಅವರ ಸುಧಾರಣೆಯ ಎಷ್ಟು ಮಹತ್ತರವಾದ ಹೊಣೆಗಾರಿಕೆ ವರ ಮೇಲಿದೆ ಎಂಬ ಅರಿವು ಸೂಫಿ ಸಂತರ ಉತ್ತರಾಧಿಕಾರಿಗಳಿಗಿದ್ದರೆ ಮುಸ್ಲಿಮರ ೂರಾರು ಸಂಕಷ್ಟಗಳು ಪರಿಹಾರಗೊಳ್ಳಲು ಸಾಧ್ಯವಿದೆ. ಸಜ್ಜಾದ ನಶೀನ್ ಎಂದು ರೆಯಲ್ಪಡುವ ಸೂಫಿವರ್ಯರ ಪ್ರಮುಖ ಉತ್ತರಾಧಿಕಾರಿಗಳು ಮತ್ತು 'ತರೀಕತ್' ಪದ್ಧತಿಯ ೀರ್‌ಗಳ ಸುತ್ತ ಸುಮಾರು ಒಂದುವರೆ ಕೋಟಿ ಮುಸ್ಲಿಮ್ ಸಮೂಹವಿದೆ. (ಇದು 1925ರ ಶ್ಲೇಷಣೆಯಾಗಿದ್ದು ಇಂದು ಪರಿಸ್ಥಿತಿ ತೀರಾ ಭಿನ್ನವಾಗಿದೆ.) ಈ ಜನರ ಮೇಲೆ ಅವರಿಗೆ ಷ್ಟು ಪ್ರಬಲವಾದ ಹಿಡಿತವಿದೆ ಎಂದರೆ ಕೇವಲ ಒಂದು ಸನ್ನೆಯಿಂದ ಅವರ ಜೀವನ ್ಯವಸ್ಥೆಯನ್ನೇ ಬದಲಿಸಲು ಅವರಿಗೆ ಸಾಧ್ಯವಿದೆ. ಹೀಗೆ ಹೇರಳ ಸಂಖ್ಯೆಯಲ್ಲಿ ಇಸ್ಲಾಮಿನ ೇವಾ ಸ್ಫೂರ್ತಿಯನ್ನು ಬೆಳೆಸುವುದರಿಂದ ಈ ಭೂಭಾಗದ ಚಿತ್ರಣವೇ ಬದಲಾಗಿ ಬಿಡುವ ಾಧ್ಯತೆ ಇದೆ. ಆದ್ದರಿಂದ ಈ ಜನರು ತಮ್ಮ ಸುರಕ್ಷಿತ ಪೀಠಗಳಿಂದ ಹೊರ ಬಂದು ಈ ಸಂದಿಗ್ಧ ಪರಿಸ್ಥಿತಿಯಲ್ಲಿ ಧರ್ಮದ ಸೇವೆಗಾಗಿಯೂ ಸ್ವಲ್ಪ ಓಡಾಟ ನಡೆಸಬೇಕಾಗಿದೆ.

## ಸತ್ಯನಿಷೇಧದ ಆಕ್ರಮಣಕ್ಕಿರುವ ಕಾರಣಗಳು-

ಬಂಗಾಳದ ಕ್ರೈಸ್ತ ಧರ್ಮ ಪ್ರಚಾರಕರು ತಮ್ಮ ಸಮ್ಮೇಳನವೊಂದರಲ್ಲಿ ಬಂಗಾಳದ ಮುಸ್ಲಿಮರನ್ನು ಕ್ರೈಸ್ತ ಧರ್ಮದೆಡೆಗೆ ಆಹ್ವಾನಿಸುವ ಕುರಿತು ಅಂಗೀಕರಿಸಿರುವ ನಿರ್ಣಯಗಳು ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಈ ಪಂಕ್ತಿಗಳನ್ನು ಓದಿದ ವಾಚಕರ ಪೈಕಿ ಎಷ್ಟು ಮಂದಿ

ದುಃಖ ಮತ್ತು ಆತಂಕ ಮಿಶ್ರಿತ ಭಾವವನ್ನು ವ್ಯಕ್ತ ಪಡಿಸಿ ಮುಂದೆ ಸಾಗಿರಬಹುದು ಮತ ಎಷ್ಟು ಮಂದಿ ಅದರಿಂದ ಪಾಠ ಕಲಿತು ಕರ್ಮರಂಗಕ್ಕಿಳಿದಿರಬಹುದೆಂದು ಹೇಳ ಸಾಧ್ಯವಿಲ್ಲ. ನಿಜವಾಗಿ ಸದ್ದುಗದ್ದಲವೆಬ್ಬಿಸುವುದು ಮುಸ್ಲಿಮ್ ಸಮುದಾಯದ ಪಾಲಿಗೆ ಒಂ ಪಿಡುಗಾಗಿ ಪರಿಣಮಿಸಿದೆ. ಎದುರಾಳಿಗಳ ದೊಡ್ಡ ಆಕ್ರಮಣ ಅಥವಾ ಯಾವುದೇ ಹುನ್ನಾರ ಕುರಿತು ನಮಗರಿವಾದಾಗ ನಾವು ನಿಬ್ಬೆರಗಾಗುತ್ತೇವೆ. ಗಾಬರಿ ಮತ್ತು ವ್ಯಸನದ ಸ್ಥಿತಿಯ ಪ್ರತಿರೋಧದ ಅಯೋಜಿತ ಉಪಾಯಗಳನ್ನು ಅನುಸರಿಸತೊಡಗುತ್ತೇವೆ. ಅಪಾಯ ತಣಿದಿ ಎಂದು ತಿಳಿದು ಬಂದ ತಕ್ಷಣ ಮತ್ತೆ ಮೌನ ವಹಿಸುತ್ತೇವೆ. ಕ್ರೈಸ್ತ ಮಿಶನರಿಗಳು ಮತ ಆರ್ಯ ಧರ್ಮ ಪ್ರಚಾರಕರು ತಂತಮ್ಮ ಧರ್ಮದ ಪ್ರಚಾರವನ್ನು ಅನೇಕ ದಶಕಗಳಿಂ ನಡೆಸುತ್ತಿದ್ದಾರೆ. (1925ರಲ್ಲಿ ಸಕ್ರಿಯವಾಗಿದ್ದ ಆರ್ಯ ಧರ್ಮ ಪ್ರಚಾರಕರ ಚಟುವಟಿಕೆಗಳ ಇಂದಿಗೂ ಜಾರಿಯಲ್ಲಿದೆ. ) ಈ ಸುದೀರ್ಘ ಅವಧಿಯಲ್ಲಿ ಅವರು ತಮ್ಮ ಕೆಲಸವನ ಅತ್ಯಂತ ಶಾಂತ ರೀತಿಯಲ್ಲಿ ನೆರವೇರಿಸಿದ್ದಾರೆ. ಅವರ ಪ್ರಯತ್ನಗಳಿಂದಾಗಿ ಅವ ಧರ್ಮಾನುಯಾಯಿಗಳ ಸಂಖ್ಯೆ ವರ್ಷಂಪ್ರತಿ ವೃದ್ಧಿಯಾಗುತ್ತಿದೆ. ಆದರೆ ಅವರ ಮೌನವನ್ನು ನಾವು ಸದಾ ನಮ್ಮಲ್ಲಿರುವಂತಹ ನಿಷ್ಕ್ರಿಯತೆಯೆಂದು ಪರಿಗಣಿಸಿದೆವು ಮತ್ತು ಎಂದೂ ಸ್ವರಕ್ಷಣೆಗಾಗಿ ಪ್ರಯತ್ನಿಸಲಿಲ್ಲ. ನಮ್ಮ ಉಪಮೆಯು ಮಾರಿಬ್* ಸಮುದಾಯದ ಹಳ್ಳಿಗರಂತಿದೆ. ಹಳ್ಳಿಗರು ಅವರ ಪೂರ್ವಜರು ನಿರ್ಮಿಸಿದ ಅಣೆಕಟ್ಟನ್ನು ದೇವಚರರಿಂದ ರಚಿತವಾದ ಅಣೆಕಟ್ಟೆಂದು ಭಾವಿಸುತ್ತಿದ್ದರು. ಅದು ಕೃಶವಾಗಲು ಅಥವಾ ದುರ್ಬಲಗೊಳ್ಳಲು ಸಾಧ್ಯವೇ ಇಲ್ಲವೆಂದು ಅವರು ಭಾವಿಸುತ್ತಿದ್ದರು. ಇಲಿಗಳು ಕ್ರಮೇಣ ಅದರಲ್ಲಿ ಬಿಲ ತೋಡ ತೊಡಗಿದಾಗ ಅವರು ಪವಾಡದಿಂದ ನಿರ್ಮಿತವಾಗಿರುವ ಅಣೆಕಟ್ಟಿಗೆ ಕೇಡುಂಟು ಮಾಡುವುದು ಇಲಿಗಳಿಗೆ ಸಾಧ್ಯವಿಲ್ಲವೆಂದು ಭಾವಿಸುತ್ತಿದ್ದರು. ಆದರೆ ಇಲಿಗಳು ಹಲವು ವರ್ಷಗಳ ಪ್ರಯತ್ನದಿಂದ ಬಿಲ ತೋಡಿ ಆ ಅಣೆಕಟ್ಟಿನಲ್ಲಿ ನೀರು ಸೋರುವಂತೆ ಮಾಡಿದವು. ಕೊನೆಗೆ ನೀರಿನ ರಭಸವನ್ನು ತಾಳಲಾರದ ಕೃಶವಾದ ಅಣೆಗಟ್ಟಿನ ಗೋಡೆಗಳು ನೆಲಸಮಗೊಂಡವು. ಪರಿಣಾಮವಾಗಿ ದೂರದೂರದ ಜನವಾಸ ಪ್ರದೇಶಗಳನ್ನು ಜಲಾವೃತಗೊಳಿಸುವಂತಹ ಮಹಾಪೂರವೊಂದು ಆ ಪ್ರದೇಶಕ್ಕೆ ಬಂದೆರಗಿತು.

ನಮ್ಮ ಸ್ಥಿತಿಯೂ ಇಂದು ಅಂತೆಯೇ ಇದೆ. ಇಸ್ಲಾಮಿನ ಅಣೆಕಟ್ಟು ಅತ್ಯಂತ ಭದ್ರವಾದುದು ಮತ್ತು ಅದನ್ನು ಮುರಿಯಲು ಯಾರಿಗೂ ಸಾಧ್ಯವಿಲ್ಲ ಎಂದು ನಮಗೆ ಬಲವಾದ ವಿಶ್ವಾಸವಿದೆ. ಈ ವಿಶ್ವಾಸ ನ್ಯಾಯೋಚಿತವಾದುದೇ ಆಗಿದೆ. ಆದರೆ ನಮ್ಮ

---

* ಮಾರಿಬ್ ಪುರಾತನ ರಾಷ್ಟ್ರವಾದ ಸಬಾದ ರಾಜಧಾನಿಯಾಗಿತ್ತು. ಅಲ್ಲಿ ಮಳೆಗಾಲದಲ್ಲಿ ಗೋಚರಿಸುವ ಒಸರಿನ ನೀರನ್ನು ಅಣೆಕಟ್ಟೊಂದರ ಮೂಲಕ ಶೇಖರಿಸಿ ಜಲಾಶಯವೊಂದನ್ನು ರಚಿಸಲಾಗಿತ್ತು. ಸಮಸ್ತ ರಾಷ್ಟ್ರ ತಮ್ಮ ಕೃಷಿಗೆ ಆ ನೀರನ್ನೇ ಆಶ್ರಯಿಸಿತ್ತು. ಆದರೆ ಇಲಿಗಳು ಬಿಲತೋಡಿ ಆ ಜಲಾಶಯದ ಮೇಲೆ ಕಟ್ಟಲಾದ ಅಣೆಕಟ್ಟು ನೆಲಸಮವಾಗುವಂತೆ ಮಾಡಿದವು. ಅದರಿಂದಾಗಿ ಸಮಸ್ತ ರಾಷ್ಟ್ರದ ಜಲಾನಯನ ವ್ಯವಸ್ಥೆ ನೆಲಕಚ್ಚಿದಂತಾಯಿತು.

ರ್ಲಕ್ಷ್ಯದಿಂದಾಗಿ ನಾವದರ ಗೋಡೆಗಳನ್ನು ದುರ್ಬಲಗೊಳಿಸಿದ್ದೇವೆ. ಆದ್ದರಿಂದಲೆ ತಲೆಕಾಯಿಗಿಂತಲೂ ದುರ್ಬಲವಾದ ಹಲ್ಲುಗಳನ್ನು ಹೊಂದಿರುವ ನಗಣ್ಯ ಅಸ್ತಿತ್ವವನ್ನು ಡೆದಿರುವ ಇಲಿಗಳು ಆ ಗೋಡೆಯಲ್ಲಿ ಬಿರುಕುಂಟು ಮಾಡುವ ತಮ್ಮ ಪ್ರಯತ್ನದಲ್ಲಿ ಶಸ್ವಿಯಾಗುತ್ತಿದೆ.

## ಮ್ಮ ಅಸಾಮರ್ಥ್ಯದಿಂದಾಗಿ ಇತರರಿಗೆ ಜಯ

ಕ್ರೈಸ್ತರು ಮತ್ತು ಆರ್ಯರು ಇಂದು ನಮಗೆದುರಾಗಿ ನಿಲ್ಲುವ ಧೈರ್ಯ ತೋರಲು ಾರಣವೇನು ಎಂದು ನಾವು ಆಲೋಚಿಸಬೇಕಾಗಿದೆ. ಅವರ ಧರ್ಮವು ಮೂಢನಂಬಿಕೆಗಳಿಂದ ುಂಬಿದೆ. ಸ್ವತಃ ಅವರೇ ಅದರ ಬಗ್ಗೆ ಗಂಭೀರವಾಗಿ ಆಲೋಚಿಸಿದರೆ ಅವರಲ್ಲಿ ನಾಚಿಕೆ ಮೂಡಬಹುದು. ಇನ್ನು ಇತರರಿಗೆ ಅದನ್ನು ಪರಿಚಯಿಸುವ ವಿಷಯ ದೂರದ ಮಾತು. ಹಾಗಿರುವಾಗ ಅವರು ತಮ್ಮ ಮೌಲ್ಯಹೀನ ಸರಕನ್ನು ಮಾರುಕಟ್ಟೆಗೆ ತಂದು ಯಶಸ್ವಿಯಾಗುತ್ತಿರಲು ಾರಣವೇನು? ಈ ಬಗ್ಗೆ ಚಿಂತಿಸಿದರೆ ಅವರ ಯಶಸ್ಸಿಗೆ ಕಾರಣ ಅವರ ಸಾಮರ್ಥ್ಯವಲ್ಲ ಬದಲಾಗಿ ನಮ್ಮ ಅಸಾಮರ್ಥ್ಯವಾಗಿದೆ ಎಂದು ವ್ಯಕ್ತವಾಗುತ್ತಿದೆ. ಸರಕು ಉತ್ತಮವಾಗಿರುವ ಅಥವಾ ಮಾರುಕಟ್ಟೆಯಲ್ಲಿ ಅದಕ್ಕೆ ಬೇಡಿಕೆಯಿರುವ ಕಾರಣದಿಂದ ಅವರು ತಮ್ಮ ಅಂಗಡಿಯನ್ನು ನಡೆಸುತ್ತಿಲ್ಲ. ಬದಲಾಗಿ ನಮ್ಮ ಬಳಿಯಿರುವ ಸರಕನ್ನು ಮೂಲೆಗುಂಪು ಮಾಡಿರುವುದರಿಂದಾಗಿ ಆ ಸರಕು ಮಾರಾಟವಾಗುತ್ತಿದೆ. ಯಾರಾದರೂ ಒಮ್ಮೆ ಇಸ್ಲಾಮಿನ ಅನುಗ್ರಹದಿಂದ ಪುನೀತನಾದರೆ ಲೋಕದ ಯಾವ ಶಕ್ತಿಯೂ ಅವನನ್ನು ಸತ್ಯಧರ್ಮದಿಂದ ವಿಮುಖಗೊಳಿಸಲು ಸಫಲವಾಗಲಾರದು ಎಂಬುದು ನಮ್ಮ ವಿಶ್ವಾಸ. ಆದರೆ ಆ ಅನುಗ್ರಹವನ್ನು ಸಮರ್ಪಿಸಲಾಗದಿದ್ದರೆ, ಪರಂಪರಾಗತವಾಗಿ ಬಂದಿರುವ ಇಸ್ಲಾಮ್ ಮಾತ್ರ ಮುಸ್ಲಿಮ್ ಜನಸಾಮಾನ್ಯರ ಧರ್ಮವಾಗುಳಿದರೆ, ಅಜ್ಞಾನ ಜನ್ಯ ಕಟ್ಟಳೆಗಳೇ ಇಸ್ಲಾಮಿನ ಜೀವಾಳವಾಗಿ ಮಾರ್ಪಟ್ಟರೆ ಮತ್ತು ಇಸ್ಲಾಮಿನ ನೈಜ ಶ್ರೇಷ್ಠತೆಗಳ ಬಗ್ಗೆ ಕಣ್ಣು ಮುಚ್ಚಿಕೊಂಡರೆ, ಅನಂತರ ಇಸ್ಲಾಮ್ ಅತ್ಯಂತ ಸುಭದ್ರವಾದುದು ಎಂದು ನಂಬಿಕೊಂಡು ಸುಮ್ಮನಿರಲು ಸಾಧ್ಯವೇ? ಇಸ್ಲಾಮನ್ನು ಸೋಲಿಸಲು ಯಾರಿಗೂ ಸಾಧ್ಯವಿಲ್ಲ ಎಂದು ಕಲ್ಪಿಸಲು ಸಾಧ್ಯವೇ? ಇಂತಹ ವಿಶ್ವಾಸಗಳಾವುವೂ. ಈ ಸಂದರ್ಭದಲ್ಲಿ ಫಲಕಾರಿಯಾಗಲಾರದು.

## ಅಪಾಯದ ನೈಜ ಕಾರಣಗಳು

ಮುಸ್ಲಿಮೇತರ ಧರ್ಮ ಪ್ರಚಾರಕರು ಮುಸ್ಲಿಮರ ನಡುವೆ ತಮ್ಮ ಧರ್ಮದ ಪ್ರಚಾರ ಮಾಡಿ ಅವರನ್ನು ಧರ್ಮ ಭ್ರಷ್ಟರನ್ನಾಗಿ ಮಾಡಲು ಹೇಗೆ ಧೈರ್ಯ ತೋರಿದರು. ಈ ಬಗ್ಗೆ ಚಿಂತನೆ ನಡೆಸಿದರೆ ನಮ್ಮ ದೌರ್ಬಲ್ಯಗಳೇ ಇದಕ್ಕೆ ಮುಖ್ಯ ಕಾರಣವೆಂದು ವ್ಯಕ್ತವಾಗುತ್ತದೆ. ಈ ದೌರ್ಬಲ್ಯಗಳು ನಮ್ಮಲ್ಲಿ ಉಳಿದಿರುವಷ್ಟು ಕಾಲ ಪ್ರಸ್ತುತ ಅಪಾಯಗಳೂ ತಪ್ಪಿದ್ದಲ್ಲ. ಆರ್ಯರು ಮತ್ತು ಕ್ರೈಸ್ತರು ನಿರ್ದಿಷ್ಟ ಜಾಗದಲ್ಲಿ ಆಕ್ರಮಣ ಮಾಡಿದರು ಮತ್ತು ಅಲ್ಲಿನ ಮುಸ್ಲಿಮರನ್ನು ಧರ್ಮ ಭ್ರಷ್ಟರನ್ನಾಗಿ ಮಾಡಿದರು ಎಂಬ ಘಟನೆಗಳನ್ನು ನಮ್ಮ ನತದೃಷ್ಟ ಕಿವಿಗಳು ನಿರಂತರ ಕೇಳುತ್ತಲೇ ಇರಬೇಕಾಗುತ್ತದೆ. ಈ ಅಪಾಯಗಳನ್ನು ಎದುರಿಸಲು

ಸಾಂದರ್ಭಿಕವಾದ, ತೇಪೆ ಹಚ್ಚುವುದಕ್ಕೆ ಸಮಾನವಾದ ಪ್ರತಿರೋಧೋಪಾಯಗಳ
ಅನುಸರಿಸುವುದರಿಂದ ಅಥವಾ ಕೈಕಟ್ಟಿ ಸುಮ್ಮನೆ ಕುಳಿತು ಕೊಳ್ಳುವುದರಿಂದ, ನಿರಂತರ ಕಾಡ
ಈ ಪಿಡುಗು ದೂರವಾಗಲಾರದು. ಇದರಿಂದ ಹೆಚ್ಚೆಂದರೆ ಇಂತಹ ಅಪಾಯಗಳಿಗೆ ನ
ಒಗ್ಗಿ ಹೋಗುವ ಮತ್ತು ಆ ಬಗ್ಗೆ ಗಮನ ಹರಿಸುವುದನ್ನೇ ಬಿಟ್ಟು ಬಿಡುವ ಸಾಧ್ಯತೆ ಇ
ನಾವು ನಮ್ಮ ದೌರ್ಬಲ್ಯಗಳಿಗೆ ಮದ್ದು ಅರೆಯುವುದು ಮತ್ತು ಅದನ್ನು ದೂರೀಕರಿಸ
ಶಾಶ್ವತ ಮತ್ತು ಪ್ರಾಯೋಗಿಕ ಉಪಾಯಗಳನ್ನು ಹುಡುಕುವುದು ಇದಕ್ಕಿರುವ ನೈಜ ಪರಿಹಾ
ಇದರಿಂದ ಶತ್ರುಗಳಿಗೆ ನಮ್ಮ ಮೇಲೆ ಆಕ್ರಮಣ ನಡೆಸಲು ಆಹ್ವಾನ ನೀಡುವಂತ
ದೌರ್ಬಲ್ಯಗಳು ನೀಗುವ ಸಾಧ್ಯತೆಯಿದೆ. ನಮ್ಮ ದೃಷ್ಟಿಯಲ್ಲಿ ಈ ಪೈಕಿ ಮೂ
ದೌರ್ಬಲ್ಯಗಳು ಅತ್ಯಂತ ಮೂಲಭೂತ ಸ್ವರೂಪದ್ದಾಗಿವೆ-

### 1. ಅಜ್ಞಾನ

ಮುಸ್ಲಿಮರ ದೊಡ್ಡ ಸಮೂಹವೊಂದು ಇಂದು ಅಜ್ಞಾನಕ್ಕೀಡಾಗಿದೆ. ಶರೀಅತ್‌ನ ಬ
ಅವರು ಎಷ್ಟು ಅಜ್ಞರಾಗಿದ್ದಾರೆಂದರೆ ಮೂಲ ಮಂತ್ರ (ಪವಿತ್ರ ವಚನ)ವನ್ನು ಉಚ್ಚರಿಸಲಿಕ
ಅವರಿಗೆ ತಿಳಿದಿಲ್ಲ. ಬೇರೆ ಮಾತಿನಲ್ಲಿ ಹೇಳುವುದಾದರೆ ಅವರು 'ನಾಮ ಮಾತ್ರ
ಮುಸ್ಲಿಮರಾಗಿಯೂ ಉಳಿದಿಲ್ಲ. ಆದ್ದರಿಂದ ಯಾವ ಧರ್ಮಕ್ಕೆ ಸೇರಿದವರು ಬೇಕಾದರ
ಅವರನ್ನು ಇಸ್ಲಾಮಿನಿಂದ ದೂರ ಸರಿಸುವಲ್ಲಿ ಯಶಸ್ವಿಯಾಗುತ್ತಾರೆ.

### 2. ಬಡತನ

ಅವರ ಪೈಕಿ ಹೆಚ್ಚಿನವರು ಕಡು ಬಡವರಾಗಿದ್ದಾರೆ. ಬಡತನ ಮತ್ತು ಅಜ್ಞಾನ ಒಂದೇ
ಸೇರಿದಾಗ ಅವರು ಬಂಡವಾಳ ಶಾಹಿ ಧರ್ಮ ಪ್ರಚಾರಕರ ಹಸ್ತದಲ್ಲಿ ಮಾರಾಟದ ಸರಕಾ
ಮಾರ್ಪಡುತ್ತಾರೆ.

### 3. ಮಿಶನರಿ ವಿದ್ಯಾ ಸಂಸ್ಥೆಗಳು

ತಮ್ಮ ಶಿಕ್ಷಣ ಸಂಸ್ಥೆಗಳಿಲ್ಲದಿರುವುದರಿಂದ ಮುಸ್ಲಿಮ್ ಬಾಲಕರು ಇಂದು ಮಿಶನ
ವಿದ್ಯಾಸಂಸ್ಥೆಗಳಲ್ಲಿ ಸೇರುತ್ತಾರೆ.* ಅಲ್ಲಿ ಆ ಕೋಮಲ ಮನಸ್ಸಿನಲ್ಲಿ ಆರಂಭದಿಂದಲೇ ಕ್ರೈಸ್

---

* 1925ರ ಪರಿಸ್ಥಿತಿಯನ್ನು ಮುಂದಿಟ್ಟು ನೋಡುವುದಾದರೆ ಸಾಮುದಾಯಿಕ ಶಿಕ್ಷ
ಸಂಸ್ಥೆಗಳಿಲ್ಲದಿರುವ ಮಾತು ದಿಟವೆಂದು ಕಂಡು ಬರುತ್ತದೆ. ಆದರೆ ಇಂದು ಹೇರಳ ಸಂಖ್ಯೆಯ
ಸಾಮುದಾಯಿಕ ಶಿಕ್ಷಣ ಸಂಸ್ಥೆಗಳಿರುವುದರ ಹೊರತಾಗಿಯೂ ಮುಸ್ಲಿಮ್ ಮಕ್ಕಳನ್ನು ಮಿಶನ
ಶಾಲೆಗಳಿಗೆ ಕಳಿಸಲಾಗುತ್ತದೆ. ಆದ್ದರಿಂದ ಸಾಮುದಾಯಿಕ ಶಿಕ್ಷಣ ಸಂಸ್ಥೆಗಳ ಕೊರತೆಯಿರುವುದ
ಮಾತ್ರವೇ ನಮ್ಮನ್ನು ಕಾಡುತ್ತಿರುವ ಕಾಯಿಲೆಯಲ್ಲವೆಂದು ವ್ಯಕ್ತವಾಗುತ್ತದೆ. ಪಾಶ್ಚಿಮಾತ್ಯ ಪ್ರವೃತ್ತಿ
ಮತ್ತು ಧಾರ್ಮಿಕ ಶಿಕ್ಷಣದ ಕೊರತೆ ನಮ್ಮನ್ನು ಕಾಡುತ್ತಿರುವ ಮೂಲಭೂತ ಪಿಡುಗಾಗಿದೆ. ಆದ್ದರಿಂದ
ಶಾಲೆಗೆ ಸೇರಿಸುವ ಮೊದಲು ಯಾವುದೇ ಸಂಸ್ಥೆ ಅಥವಾ ಮನೆಯಲ್ಲಿ ಮಕ್ಕಳಿಗೆ ಕುರ್‌ಆನ್‌ನ ಆರಂಭಿ
ಶಿಕ್ಷಣದ ವ್ಯವಸ್ಥೆ ಅತ್ಯವಶ್ಯಕವಾಗಿದೆ.

ರ್ಮದ ಅಚ್ಚೊತ್ತಲಾಗುತ್ತದೆ. ಕ್ರಮೇಣ ಅದು ಕೆಲವೊಮ್ಮೆ ಸುಪ್ತವಾದ ಮತ್ತು ಕೆಲವೊಮ್ಮೆ ಹಿರಂಗವಾದ ಧರ್ಮ ಭ್ರಷ್ಟತೆಯ ರೂಪ ತಾಳುತ್ತದೆ.

ಇದು ನಮ್ಮನ್ನು ಕಾಡುತ್ತಿರುವ ಧಾರ್ಮಿಕ ಸಂಕಷ್ಟಗಳ ಒರತೆಗಳಾಗಿವೆ. ಇದರ ುಟ್ಟಿಗೆ ಇಂದು ಇರುವ ವ್ಯಾಪಕ ಅವಕಾಶಗಳನ್ನು ಎಣಿಸಲಿಕ್ಕೂ ಸಾಧ್ಯವಿಲ್ಲ. ಅಲ್ಲದೆ ಆ ಗ್ಗೆ ಸುದೀರ್ಘ ಚರ್ಚೆ ನಡೆಸಲಿಕ್ಕೂ ಅವಕಾಶವಿಲ್ಲ. ಒಟ್ಟಿನಲ್ಲಿ ಈ ಪರಿಸ್ಥಿತಿಯ ಹುಟ್ಟಿಗೆ ಾರಣವಾದ ಅಂಶಗಳ ಪೈಕಿ ಕೆಲವು ಅತ್ಯಂತ ಮೂಲಭೂತ ಸ್ವರೂಪದ್ದಾಗಿದೆ ಎಂದು ೇಳಬಹುದಾಗಿದೆ. ಉದಾಹರಣೆಗೆ ಇಸ್ಲಾಮೇತರ ಸಂಪ್ರದಾಯಗಳ ವೃದ್ಧಿ, ಮುಸ್ಲಿಮರ ಸಮುದಾಯಿಕ ಶಕ್ತಿ ಛಿನ್ನಭಿನ್ನವಾಗಿರುವುದು, ಮುಸ್ಲಿಮರಲ್ಲಿ ಆರ್ಥಿಕ ಶಕ್ತಿಯ ಅರಿವಿಲ್ಲದಿರುವುದು ಮತ್ತು ಪರಿಣಾಮವಾಗಿ ಬಡತನ ಹೆಚ್ಚುತ್ತಿರುವುದು ಇತ್ಯಾದಿ.

## ನಮ್ಮ ಮುಗ್ಧತೆ ಮತ್ತು ಸಂಕುಚಿತ ದೃಷ್ಟಿ ಹಾಗೂ ಎದುರಾಳಿಗಳ ಕುಹಕ ಮತ್ತು ತಂತ್ರಗಳು

ಈ ದೌರ್ಬಲ್ಯ ಮತ್ತು ಕಾರಣಗಳಿಗೆ ಸಂಬಂಧಿಸಿದಂತೆ ಯಾವುದರ ಕುರಿತೂ ನಾವು ಇತರರನ್ನು ಬೊಟ್ಟು ಮಾಡಿ ತೋರಿಸುವಂತಿಲ್ಲ. ಈ ಪೈಕಿ ಯಾವುದರ ಉಗಮ ಕೇಂದ್ರವೂ ನಮ್ಮ ಶತ್ರುಗಳ ಬಳಿಯಲ್ಲಿಲ್ಲ. ಹಾಗಿರುವಾಗ ಈ ಸಮಸ್ಯೆಗಳ ಬಗ್ಗೆ ಗುಲ್ಲೆಬ್ಬಿಸುವುದು, ಆ ಬಗ್ಗೆ ಸಭೆ ಸಮಾರಂಭಗಳನ್ನು ನಡೆಸುವುದು ಅಥವಾ ಧರ್ಮ ಭ್ರಷ್ಟತೆಗೆ ಈಡಾಗಿರುವ ಪ್ರದೇಶಗಳಲ್ಲಿ ಸಂಚರಿಸಲು ಧರ್ಮ ಪ್ರಚಾರಕರನ್ನು ಕಳುಹಿಸುವುದೇ ಮುಂತಾದ ಸಾಂಪ್ರದಾಯಿಕ ವಿಧಾನಗಳು ಈ ನಿಟ್ಟಿನಲ್ಲಿ ಫಲಕಾರಿಯಾಗಲಾರದು. ಈ ಪೈಕಿ ಯಾವುದೂ ರೋಗದ ನೈಜ ಪರಿಹಾರೋಪಾಯವಲ್ಲ. ಅಂತಹ ಕ್ರಮಗಳಿಂದ ರೋಗಶಮನವಾಗಲೂ ಸಾಧ್ಯವಿಲ್ಲ. ನಮ್ಮ ಎದುರಾಳಿಗಳ ವಿಧಾನವೂ ಅದುವೇ ಆಗಿದ್ದರೆ ಅದಕ್ಕೆ ಪ್ರತಿಯಾಗಿ ನಾವು ಅನುಸರಿಸುವ ಪ್ರಸ್ತುತ ವಿಧಾನಗಳು ಪ್ರಾಯಶಃ ಫಲಕಾರಿಯಾಗುತ್ತಿತ್ತು. ಆದರೆ ಅವರು ಪ್ರಚಾರ ಮತ್ತು ಉಪದೇಶಗಳ ವಿಧಾನವನ್ನೂ ನಮ್ಮನ್ನು ನಿಬಿಡಗೊಳಿಸುವ ಉಪಾಯವನ್ನಾಗಿ ಮಾತ್ರ ಉಪಯೋಗಿಸುತ್ತಿದ್ದಾರೆ. ಆದರೆ ಅವರ ಕಾರ್ಯವಿಧಾನ ತೀರಾ ಭಿನ್ನವಾಗಿದೆ. ನಮ್ಮ ರಾಜಕೀಯ ಮತ್ತು ಆರ್ಥಿಕ ದಾಸ್ಯ, ನಮ್ಮ ಧಾರ್ಮಿಕ ವಿದ್ವಾಂಸರ ಅಲಕ್ಷ್ಯ, ನಮ್ಮ ಶಕ್ತಿಯ ವಿಚ್ಛಿದ್ರತೆ, ಧರ್ಮದ ಕುರಿತು ನಮಗಿರುವ ಅಜ್ಞಾನ, ಮತ್ತಿತರ ನಮ್ಮೆಲ್ಲಾ ದೌರ್ಬಲ್ಯಗಳಿಂದ ಅವರು ಪೂರ್ಣ ಪ್ರಯೋಜನ ಪಡೆಯುತ್ತಾರೆ.

ಅವರು ಸಾವಿರಾರು ಆಸ್ಪತ್ರೆಗಳನ್ನು ಸ್ಥಾಪಿಸಿದ್ದಾರೆ. ಅಲ್ಲಿ ಮಾನವಕುಲದ ಸೇವೆ ಮಾಡುವ ಹೆಸರಲ್ಲಿ ಅವರು ಅಜ್ಞಾನದಲ್ಲಿರುವ ರೋಗಿಗಳಿಗೆ ತಮ್ಮ ಧರ್ಮದ ಉಪದೇಶ ನೀಡುತ್ತಾರೆ. ಅಂತೆಯೇ ಸಾವಿರಾರು ಅನಾಥಾಶ್ರಮಗಳನ್ನು ತೆರೆದಿದ್ದಾರೆ. ಅಲ್ಲಿ ಅನಾಥರು ಮತ್ತು ನಿರಾಶ್ರಿತರಾದ ಸಾವಿರಾರು ಮಕ್ಕಳಿಗೆ ಕ್ರೈಸ್ತ ಧರ್ಮದ ಕಶಾಯ ಕುಡಿಸಲಾಗುತ್ತದೆ. ಅವರು ಎಷ್ಟು ವ್ಯವಸ್ಥಿತರಾಗಿದ್ದಾರೆಂದರೆ ಎಲ್ಲಾದರೂ ಬರ ಅಥವಾ ಇನ್ನಾವುದಾದರೂ

ನೈಸರ್ಗಿಕ ವಿಕೋಪಗಳು ಗೋಚರಿಸಿದ ತಕ್ಷಣ ಅವರು ಸಂತ್ರಸ್ತ ಜನರಿಗೆ ಆಶ್ರಂ ಒದಗಿಸುತ್ತಾರೆ. ರೊಟ್ಟಿ ಬಟ್ಟೆಗಳನ್ನು ಒದಗಿಸುವ ಉಪಕಾರದ ಹೆಸರಲ್ಲಿ ಅವರು ತಮ ಧರ್ಮದ ಪ್ರಚಾರ ಮಾಡುತ್ತಾರೆ. ಭಾರತದ ಉದ್ದಗಲಗಳಲ್ಲಿ ಅವರು ಸಹಸ್ರಾರು ಶಾಲ ಕಾಲೇಜುಗಳನ್ನು ಸ್ಥಾಪಿಸಿದ್ದಾರೆ. ಅಲ್ಲಿ ಬಹಳ ಸಾವಧಾನವಾಗಿ ಮಕ್ಕಳನ್ನು ಧರ್ಮಭ್ರಷ್ಟತೆ ಗುರಿಪಡಿಸಲಾಗುತ್ತದೆ. ಅವರು ತಮ್ಮಲ್ಲಿ ಎಂತಹ ತಾಳ್ಮೆ, ದೃಢಚಿತ್ತತೆ, ತ್ಯಾಗ ಮತ್ತು ಸೇವ ಮನೋಭಾವ ಹಾಗೂ ಧರ್ಮದ ನೈಜ ಆಸಕ್ತಿಯನ್ನು ಬೆಳೆಸಿಕೊಂಡಿದ್ದಾರೆಂದರೆ ಅನೇ ವರ್ಷಗಳ ಕಾಲ ಒಂದೇ ಸ್ಥಳದಲ್ಲಿ ಬ್ರಹ್ಮಚಾರಿಯಾಗಿ ಸನ್ಯಾಸದ ಬದುಕನ್ನು ಬಾಳುತ್ತಾ ಫಕೀರರ ಅಥವಾ ಯೋಗಿಗಳ ಬದುಕು ಬಾಳಿ ಅತ್ಯಂತ ಶಾಂತ ರೀತಿಯಲ್ಲಿ ಧರ್ಮ ಪ್ರಚಾರ ಕೈಗೊಳ್ಳುತ್ತಾರೆ. ಅವರಲ್ಲಿ ಎಷ್ಟು ಬುದ್ಧಿ ಮತ್ತು ವಿವೇಕವಿದೆಯೆಂದ ಪ್ರಾಮಾಣಿಕವಲ್ಲದಿದ್ದರೂ ತೋರಿಕೆಯ ಸರಳತೆ, ಧರ್ಮನಿಷ್ಠೆ ಮತ್ತು ಚಾರಿತ್ರ್ಯದ ಮಾದರಿಯನ್ನ ಪ್ರದರ್ಶಿಸುತ್ತಾರೆ. ಇದರಿಂದಾಗಿ ಅವರ ಲೇಖನ-ಭಾಷಣಗಳಿಗಿಂತ ಅವರ ಜೀವನವೇ ಶಾಶ್ವತವಾದ ಸಂದೇಶ ಪ್ರಚಾರದ ಮಾಧ್ಯಮವಾಗಿ ಮಾರ್ಪಡುತ್ತದೆ. ಇದೆಲ್ಲದರ ಜತೆ ನಮ್ಮ ಬಡತನದಿಂದ ಪ್ರಯೋಜನ ಪಡೆದು ಆರ್ಥಿಕ ಒತ್ತಡ ಹೇರುವ ಕುಹಕವೂ ನಮ್ಮ ಎದುರಾಳಿಗಳ ಕೂಟವೊಂದರಲ್ಲಿ ಅತ್ಯಂತ ಹೆಚ್ಚು ಕಂಡು ಬರುತ್ತದೆ. ಹೀಗೆ ಹಣದ ಬಲದಿಂದಲೂ ಅವರು ತಮ್ಮ ಧರ್ಮದ ಪ್ರಚಾರದಲ್ಲಿ ಯಶಸ್ವಿಯಾಗುತ್ತಾರೆ.

ಈ ವಿಧಾನಗಳು ಎಷ್ಟು ಪ್ರಭಾವಪೂರ್ಣವಾದ ಮತ್ತು ಘನವಾದ ವಿಧಾನಗಳಾಗಿವೆ ಎಂಬುದು ಸರ್ವವಿದಿತ. ಇದರ ಉಪಮೆಯು ಏಕ ಕಾಲಕ್ಕೆ ಸದ್ದುಗದ್ದಲವೆಬ್ಬಿಸುವ, ಕಟ್ಟಡಗಳನ್ನು ಮೂಲೋತ್ಪಾಟನೆ ಮಾಡುವ ಹಾಗೂ ಸುಳಿಯೆಬ್ಬಿಸಿ ದೊಡ್ಡ ದೊಡ್ಡ ಕಟ್ಟಡಗಳ ಬುನಾದಿಯನ್ನೇ ನಾಶ ಪಡಿಸುವ ಮಹಾ ಪೂರಕ್ಕೆ ಸಮಾನವಾಗಿದೆ. ಅದಕ್ಕೆ ಪ್ರತಿಯಾಗಿ ಸಾಮಾನ್ಯ ಕಟ್ಟೆ ಕಟ್ಟುವುದು ಅಥವಾ ತೇಪೆ ಹಚ್ಚುವುದು ಫಲಕಾರಿಯಾಗಲಾರದು. ಅದಕ್ಕೆ ವಿರುದ್ಧವಾಗಿ ನಾವೂ ಅಷ್ಟೇ ಘನತಮವಾದ ಮತ್ತು ವ್ಯಾವಹಾರಿಕವಾದ ಮಾಧ್ಯಮಗಳನ್ನು ಅನುಸರಿಸಬೇಕಾಗಿದೆ. ಅನ್ಯಥಾ ಅವರ ಮುಂದೆ ನಾವು ಜಯಗಳಿಸುವುದು ಕಷ್ಟ ಸಾಧ್ಯ ಮಾತ್ರವಲ್ಲ, ಅಸಾಧ್ಯವೂ ಆಗಿದೆ.

## ಪ್ರತಿರೋಧ ತಂತ್ರಗಳು

ಅವಿಭಜಿತ ಭಾರತದಲ್ಲಿ ಇಸ್ಲಾಮನ್ನು ನಾಮಾವಶೇಷ ಗೊಳಿಸದಿದ್ದರೂ ಅದನ್ನು ದುರ್ಬಲ ಮತ್ತು ಶೋಷಿತ ಅವಸ್ಥೆಗೆ ತಳ್ಳಿ ಬಿಡಲು ಸಾಧ್ಯವಾಗುವಂತಹ ಅಪಾಯ ಮತ್ತು ಆಂತರಿಕ ದೌರ್ಬಲ್ಯಗಳ ಬಗ್ಗೆ ನಾವಿಲ್ಲಿ ಚರ್ಚಿಸಿದ್ದೇವೆ.*

ಇಸ್ಲಾಮಿನ ಶಕ್ತಿಯನ್ನು ಮುರಿಯಲಿಕ್ಕಾಗಿ ಅದರ ವಿರುದ್ಧ ವಿರೋಧಿಗಳು

---

* ಇದನ್ನು 1925ರ ವೇಳೆ ಇದ್ದ ಸನ್ನಿವೇಶಗಳ ಹಿನ್ನೆಲೆಯಲ್ಲಿ ಬರೆಯಲಾಗಿದೆ ಎಂಬುದನ್ನು ವಾಚಕರು ಗಮನದಲ್ಲಿರಿಸಿಕೊಳ್ಳಬೇಕು.

ಪಯೋಗಿಸುತ್ತಿರುವ ಗಂಭೀರ ಮತ್ತು ಪರಿಣಾಮಕಾರಿಯಾದ ತಂತ್ರಗಳ ಸಂಕ್ಷಿಪ್ತ ತ್ರಣವನ್ನು ನಾವು ವಾಚಕರ ಮುಂದಿರಿಸಿದ್ದೇವೆ. ಅಷ್ಟೇ ಘನ ಮತ್ತು ಪರಿಣಾಮಕಾರಿಯಾದ ಂತ್ರಗಳನ್ನು ಉಪಯೋಗಿಸುವ ತನಕ ಇಸ್ಲಾಮಿನ ರಕ್ಷಣೆ ಮತ್ತು ವಿಸ್ತರಣೆಯಲ್ಲಿ ಯಗಳಿಸಲು ನಮಗೆ ಸಾಧ್ಯವಿಲ್ಲವೆಂದೂ ಇದರಿಂದ ವ್ಯಕ್ತವಾಗುತ್ತದೆ. ಇನ್ನು ಪ್ರತಿರೋಧಕ್ಕೆ ಂಬಂಧಿಸಿದಂತೆ ನಮ್ಮ ಉಪಾಯ ಮತ್ತು ಕಾರ್ಯ ನೀತಿ ಏನಾಗಿರಬೇಕೆಂಬ ಕುರಿತು ಳಕು ಚೆಲ್ಲುವುದು ಕೂಡ ಅವಶ್ಯಕವೆನಿಸುತ್ತದೆ-

## . ಇಸ್ಲಾಮೀ ಶಿಕ್ಷಣಗಳ ವ್ಯಾಪಕ ಪ್ರಚಾರ ಮತ್ತು ಇಸ್ಲಾಮೀ ಜಾಗೃತಿ ಮೂಡಿಸುವುದು

ಅಜ್ಞಾನವೇ ನಮ್ಮ ಅತಿ ದೊಡ್ಡ ದೌರ್ಬಲ್ಯವೆಂದು ನಾವು ಈಗಾಗಲೇ ಪ್ರಸ್ತಾವಿಸಿದ್ದೇವೆ. ಮುಸ್ಲಿಮರ ದೊಡ್ಡ ವಿಭಾಗವೊಂದು ತಮ್ಮ ಧಾರ್ಮಿಕ ಬೋಧನೆ, ವಿಶ್ವಾಸ ಮತ್ತು ಾಂಭನಗಳ ಬಗ್ಗೆ ಸಂಪೂರ್ಣ ಅಜ್ಞವಾಗಿದೆ. ಶತ್ರುಗಳು ಅವರನ್ನು ಧರ್ಮಭ್ರಷ್ಟರನ್ನಾಗಿ ಮಾಡಲು ಸಹಾಯಕವಾಗುವ ಅಂಶ ಇದುವೇ ಆಗಿದೆ. ಆದ್ದರಿಂದ ಭಾರತ (ಅರ್ಥಾತ್ ಪಾಕಿಸ್ತಾನ ಮತ್ತು ಬಾಂಗ್ಲಾದೇಶಗಳನ್ನೊಳಗೊಂಡ ಅವಿಭಜಿತ ಭಾರತ)ದ ಅಜ್ಞಾನಕ್ಕೀಡಾಗಿರುವ ಮುಸ್ಲಿಮರಲ್ಲಿ ಇಸ್ಲಾಮಿನ ಬೋಧನೆಗಳನ್ನು ವ್ಯಾಪಕ ಪ್ರಚಾರ ಪಡಿಸುವುದು ನಮ್ಮ ಪ್ರಾಥಮಿಕ ಅವಶ್ಯಕತೆಯಾಗಿದೆ. ಇಸ್ಲಾಮಿನ ಸರಳ ವಿಶ್ವಾಸಾಚಾರಗಳನ್ನು ಅವರಿಗೆ ಮಂದಟ್ಟು ಮಾಡಿಸಬೇಕಾಗಿದೆ. ಅವರು ನಮಾಝ್ ಮತ್ತು ಉಪವಾಸ ವ್ರತದ ಪಾಲಕರಾಗಿ ಬಿಡುವಂತೆ ಅವರಲ್ಲಿ ಧಾರ್ಮಿಕ ಸ್ಫೂರ್ತಿಯನ್ನು ಬೆಳೆಸಬೇಕಾಗಿದೆ. ಅದಕ್ಕಾಗಿ ಪ್ರತಿಯೊಂದು ಹಳ್ಳಿ ಪ್ರದೇಶಗಳಲ್ಲಿ ಜನರಿಗೆ ತಮ್ಮ ಬಿಡುವಿನ ವೇಳೆ ಕ್ರಮೇಣ ಇಸ್ಲಾಮಿನ ಬೋಧನೆ ೀಡುವಂತಹ ಮತ್ತು ಅವರ ಭಾಷೆಯಲ್ಲೇ ಅವರಿಗೆ ಇಸ್ಲಾಮಿನ ಮೇಲ್ಮೆಯ ಬಗ್ಗೆ ತಿಳಿ ಹೇಳುವಂತಹ ವ್ಯಕ್ತಿಗಳನ್ನು ನೇಮಿಸಬೇಕಾಗಿದೆ. ಅದೇ ಸಂದರ್ಭದಲ್ಲಿ ಮುಸ್ಲಿಮೇತರರನ್ನೂ ಇಸ್ಲಾಮಿನೆಡೆಗೆ ಆಹ್ವಾನಿಸಬಹುದಾಗಿದೆ. ಆದರೆ ಸದ್ಯ ನಮ್ಮ ಗಮನ ಸಂಪೂರ್ಣವಾಗಿ ಮುಸ್ಲಿಮರನ್ನು ನೈಜ ಮುಸ್ಲಿಮರನ್ನಾಗಿ ಮಾಡುವ ಕಡೆಗಿರಬೇಕಾಗಿದೆ. ಅವರಲ್ಲಿರುವ ಸುಪ್ತ ಧಾರ್ಮಿಕ ಆಸಕ್ತಿಯನ್ನು ಬಡಿದೆಬ್ಬಿಸಿದ ನಂತರ ನಮ್ಮ ಆಂತರಿಕ ಭದ್ರತೆಯನ್ನು ಬಾಹ್ಯ ಆಕ್ರಮಣಗಳಿಂದ ರಕ್ಷಿಸುವ ಕೆಲಸ ನೆರವೇರುತ್ತದೆ. ತದನಂತರ ನಮಗೆಲ್ಲರಿಗೂ ಮುಸ್ಲಿಮೇತರರ ಕಡೆಗೆ ಗಮನ ಹರಿಸುವ ಸೂಕ್ತ ಅವಕಾಶ ದೊರೆಯಬಹುದು.

## 2. ಧಾರ್ಮಿಕ ಪಾಠಶಾಲೆಗಳ ಸ್ಥಾಪನೆ

ಅನಂತರ ಮುಸ್ಲಿಮ್ ಮಕ್ಕಳಿಗೆ ಪ್ರಾಥಮಿಕ ಧಾರ್ಮಿಕ ಶಿಕ್ಷಣ ನೀಡಲಿಕ್ಕಾಗಿ ಹಳ್ಳಿ ಹಳ್ಳಿಗಳಲ್ಲಿ ಧಾರ್ಮಿಕ ಪಾಠಶಾಲೆಗಳನ್ನು ಸ್ಥಾಪಿಸಬೇಕಾಗಿದೆ. ಅದಕ್ಕಾಗಿಯೂ ಯಾವುದೇ ವಿಸ್ತೃತ ವ್ಯವಸ್ಥೆ ಮತ್ತು ನಿರ್ದಿಷ್ಟ ಪಠ್ಯಕ್ರಮದ ಅಗತ್ಯವಿಲ್ಲ. ಇಸ್ಲಾಮಿನ ಮೂಲಭೂತ

ವಿಶ್ವಾಸಗಳನ್ನು ಅವರಿಗೆ ಸರಳವಾಗಿ ಮಂದಟ್ಟುಗೊಳಿಸುವುದು ಅವರನ್ನು ಮುಸ್ಲಿಮರ
ಮಾಡಲು ಪರ್ಯಾಪ್ತವಿದೆ. ವುಝೂ, ಶೌಚದ ನಿಯಮಗಳು, ನಮಾಝ್, ಉಪವಾಸ
ಇತ್ಯಾದಿಗಳ ಕುರಿತು ಇರುವ ಸಾಮಾನ್ಯ ನಿಯಮಗಳನ್ನು ಅವರಿಗೆ ತಿಳಿಯ ಪಡಿಸಬೇ
ಅವರಿಗೆ ಕುರ್‌ಆನ್ ಓದಲು ಕಲಿಸಬೇಕು. ಕುರ್‌ಆನನ್ನು ಕೇವಲ ಪಠಿಸಲು ಕಲಿಸುವ
ಕೂಡ ಇಸ್ಲಾಮಿನ ಘನತೆಯನ್ನು ಮನಸ್ಸಿನಲ್ಲಿ ಬಿತ್ತಲು ಪರ್ಯಾಪ್ತವಿದೆ. ಅನಂತರ ಅ
ಮನಸ್ಸನ್ನು ಸುಲಭದಲ್ಲಿ ಬದಲಿಸಲು ಯಾರಿಗೂ ಸಾಧ್ಯವಿಲ್ಲ. ನಮ್ಮ ಮಕ್ಕಳಿಗೆ ಉಪಯುಕ್ತ
ಶಿಕ್ಷಣವನ್ನು ನೀಡುವ ಸ್ಥಿತಿಯಲ್ಲಿ ನಾವಿಲ್ಲದಿದ್ದರೂ ಅವರ ಮೇಲೆ ಸತ್ಯನಿಷೇಧವು ಪ್ರಭ
ಬೀರದಂತೆ, ಅವರ ಮುಗ್ಧ ಹೃದಯದಲ್ಲಿ ಕುರ್‌ಆನ್‌ನ ಅಚ್ಚೊತ್ತಲ್ಪಡುವಂತೆ ಮಾಡಬೇಕಾ

ಈ ಕನಿಷ್ಠತಮ ಕೆಲಸವನ್ನು ನಾವು ಸ್ವಲ್ಪವೂ ಹಿಂಜರಿಯದೆ ನೆರವೇರಿಸಬೇಕಾ
ಇದಕ್ಕಾಗಿ ಸಂಚಾರಿ ಉಪದೇಶಕರು ಸಾಕಾಗಲಾರರು. ಬದಲಾಗಿ ಒಂದೆಡೆ ನೆಲೆಯ
ಮಿಶನರಿಗಳಂತೆ ಗ್ರಾಮೀಣ ಜೀವನದ ಬವಣೆಗಳನ್ನು ಅರಗಿಸಿಕೊಂಡು ದೃಢಚಿತ್ತತೆಯೊಂ
ಧರ್ಮದ ಸೇವೆಗೈಯುವವರ ಅವಶ್ಯಕತೆ ಇದೆ. ಅತ್ಯಂತ ಯಶಸ್ವಿ ರೀತಿಯಲ್ಲಿ ಜನರ ಅಜ್ಞ
ಜನ್ಯ ಸ್ವಭಾವಗಳನ್ನು ಎದುರು ಹಾಕಿಕೊಳ್ಳಬಲ್ಲಂತಹ ದೃಢ ಚಿತ್ತತೆ ಅವರಲ್ಲಿರಬೇಕಾಗಿ
ಆರಂಭದಲ್ಲಿ ತಲೆದೋರಬಹುದಾದ ಪರಾಭವಗಳಿಂದ ಅವರು ಧೈರ್ಯ ಗುಂದಬಾರ
ಬಹುದೇವಾರಾಧನೆಯಿಂದ ಪ್ರಭಾವಿತಗೊಂಡ ವಿಶ್ವಾಸ, ಸಂಪ್ರದಾಯ ಮ
ನವೀನಾಚಾರಗಳನ್ನು ದೂರೀಕರಿಸುವಲ್ಲಿ ಹಲವು ವರ್ಷಗಳು ಸಂದರೂ ಅವ
ನಿರಾಶರಾಗಬಾರದು. ಆತುರ ತೋರಿ ಅಜ್ಞಾನದೊಂದಿಗೆ ಜಗಳ ಕಾಯಬಾರದು. ಮೆ
ಮೆಲ್ಲನೆ ಸದುಪದೇಶಗಳ ಮೂಲಕ ಹಾಗೂ ಬೋಧನೆಗಳ ಮೂಲಕ ಅವರ ಸ್ವಭಾವವ
ಸುಧಾರಣೆಗೆ ಸನ್ನದ್ಧಗೊಳಿಸಬೇಕಾಗಿದೆ. ಅದರ ಜತೆಗೆ ತಮ್ಮ ಧಾರ್ಮಿಕ ಸೇವೆಗೆ ಪ್ರತಿಯ
ಆ ಬಡ ಜನಾಂಗಗಳಿಂದ ಕನಿಷ್ಠತಮವಾದ ಆರ್ಥಿಕ ಪ್ರತಿಫಲವನ್ನು ಪಡೆಯುವಂತಹ ತಾ
ಮನೋಭಾವವೂ ಅವರಲ್ಲಿರಬೇಕಾಗಿದೆ. ಕ್ರೈಸ್ತ ಮಿಶನರಿಗಳಂತೆ ಕೋಟಿಗಟ್ಟಲೆ ರೂಪಾಯಿಗಳ
ನೀರಿನಂತೆ ವ್ಯಯಿಸಲು ಆ ಜನಾಂಗಗಳಿಗೆ ಸಾಧ್ಯವಿಲ್ಲ. ಮುಗ್ಧ ಹಳ್ಳಿಗರನ್ನು ತವ
ಕರ್ಮಗಳಿಂದ ವಿಮುಖಗೊಳಿಸುವ ಬದಲು ತಮ್ಮ ಸಚ್ಚಾರಿತ್ರ್ಯದಿಂದಾಗಿ ಅವ
ಮನಸೂರೆಗೊಳ್ಳುವಂತಹ ನೈತಿಕ ಪಾವನತೆಯೂ ಅವರಲ್ಲಿರಬೇಕಾಗಿದೆ. ಜನರು ಅವ
ಮೂಲಕ ಇಸ್ಲಾಮೀ ಬೋಧನೆಗಳ ವ್ಯಾವಹಾರಿಕ ಪಾಠ ಕಲಿಯುವಂತಹ ಇಸ್ಲಾಮೀ ಜೀವನ
ಮಾದರಿಯನ್ನೂ ಅವರು ಪ್ರದರ್ಶಿಸಬೇಕಾಗಿದೆ.

## 3. ನೈಸರ್ಗಿಕ ಪ್ರಕೋಪಗಳಿಂದ ಸಂತ್ರಸ್ತರಾದವರಿಗೆ ಮತ್ತು ಅನಾಥ ಸಂರಕ್ಷಣೆಗೆ ಸ್ಥಾಯಿ ವ್ಯವಸ್ಥೆ

ನೈಸರ್ಗಿಕ ವಿಕೋಪಗಳಿಂದ ಸಂತ್ರಸ್ತರಾದವರಿಗೆ ಪರಿಹಾರ ವ್ಯವಸ್ಥೆಯನ್ನು ಸ್ಥಾಪಿಸುವುದು
ಮುಸ್ಲಿಮರ ಕರ್ತವ್ಯವಾಗಿದೆ. ಈ ಕೆಲಸವನ್ನು ಸಾಮಾನ್ಯವಾಗಿ ನಾವು ಕ್ರೈಸ್ತ ಮಿಶನರಿ ಮತ

ಆರ್ಯ ಸಮಾಜದವರ ಕೃಪಾಶ್ರಯಕ್ಕೆ ಬಿಟ್ಟು ಬಿಡುತ್ತೇವೆ. ಉದಾಹರಣೆಗೆ ಬರ ಮತ್ತು ನೆರೆಯಂತಹ ವಿಕೋಪಗಳ ವೇಳೆ ಸಾವಿರಾರು ಸ್ತ್ರೀ-ಪುರುಷರು ಮತ್ತು ಮಕ್ಕಳು ಸಂತ್ರಸ್ತರಾಗುತ್ತಾರೆ. ಅವರಿಗೆ ಆಶ್ರಯ ನೀಡಲು ಯಾರೂ ಮುಂದಾಗುವುದಿಲ್ಲ. ಕೊನೆಗೆ ತಮ್ಮ ವಿಶ್ವಾಸ ಮತ್ತು ಧರ್ಮವನ್ನು ಮಾರಿ ಅವರು ಬಂಡವಾಳಶಾಹಿ ಮಿಶನರಿಗಳಿಂದ ಹೊಟ್ಟೆ ತುಂಬ ಊಟ ಮತ್ತು ಮೈ ತುಂಬ ಬಟ್ಟೆಯನ್ನು ಪಡೆಯಬೇಕಾಗುತ್ತದೆ. ಹಾಗೆಯೇ ಯಾವುದೇ ವಾರೀಸುದಾರರಿಲ್ಲದೆ ಅದೆಷ್ಟೋ ಮಕ್ಕಳು ಕೇವಲ ಆಶ್ರಯ ತಾಣವಿಲ್ಲದ ಕಾರಣದಿಂದ ಅಹೋರಾತ್ರಿ ಪೋಲಿಗಳಾಗಿ ತಿರುಗುತ್ತಿರುತ್ತಾರೆ. ಅವರನ್ನು ಕ್ರೈಸ್ತ ಮತ್ತು ಆರ್ಯ ಅನಾಥಾಶ್ರಮಗಳು ತಮ್ಮೆಡೆಗೆ ಸೆಳೆದುಕೊಳ್ಳುತ್ತವೆ. ಇವರೆಲ್ಲರೂ ಧರ್ಮಭ್ರಷ್ಟತೆಯ ಸಾಮಾನ್ಯ ಬಲಿಪಶುಗಳಾಗಿದ್ದಾರೆ. ಇವರನ್ನು ಮುಸ್ಲಿಮರ ಅಲಕ್ಷ್ಯವೇ ಇಸ್ಲಾಮಿನ ಮಡಿಲಿನಿಂದ ಸತ್ಯನಿಷೇಧದ ತೆಕ್ಕೆಗೆ ತಳ್ಳಿಬಿಡುತ್ತದೆ. ಈ ಅಪಾಯವನ್ನು ತಡೆಗಟ್ಟಲು ನಿರಾಶ್ರಿತರ ಧಾಮದ ಸ್ಥಾಯಿ ವ್ಯವಸ್ಥೆ ಅಗತ್ಯವಿದೆ. ಅದಕ್ಕಾಗಿ ದೊಡ್ಡ ಪ್ರಮಾಣದಲ್ಲಿ ಯಾವುದೇ ವ್ಯವಸ್ಥೆಯನ್ನು ರಚಿಸಬೇಕಾಗಿಲ್ಲ. ಕನಿಷ್ಠಪಕ್ಷ ನಿರಾಶ್ರಿತರು ಮಿಶನರಿಗಳ ಕೈ ಸೇರುವುದನ್ನು ತಪ್ಪಿಸುವ ವ್ಯವಸ್ಥೆಯನ್ನಾದರೂ ಮಾಡಬೇಕಾಗಿದೆ. ಅವರಿಗೆ ಉದ್ಯೋಗ ದೊರಕಿಸಲು ಮತ್ತು ಲೋಕದಲ್ಲಿ ಅವರು ಏನನ್ನಾದರೂ ಸಾಧಿಸುವ ಹಂತಕ್ಕೆ ತಲುಪುವಂತಾಗಲು ಅನುಸರಿಸಬೇಕಾದ ಉಪಾಯವೇನು ಎಂಬುದು ಅನಂತರದ ಪ್ರಶ್ನೆ. ಸದ್ಯ ಅವರ ಧರ್ಮವನ್ನು ರಕ್ಷಿಸುವುದೇ ನಮ್ಮ ಗುರಿಯಾಗಬೇಕಾಗಿದೆ. ಅದಕ್ಕಾಗಿ ನಾವು ಅವರನ್ನು ಗುಲಾಮರಂತೆ ಪರಿಗಣಿಸದೆ ಕರುಣಾರ್ಹರಾದ ಸೇವಕರಂತೆ ಕಂಡು ಪೋಷಿಸಬಲ್ಲವರ ಆಶ್ರಯದಲ್ಲಿರುವಂತೆ ಮಾಡಬೇಕಾಗಿದೆ. ಅವರಲ್ಲಿ ಯಾವುದಾದರೂ ಕೆಲಸ ಮಾಡುವ ಕೌಶಲ್ಯವಿದ್ದರೆ ಅದರಲ್ಲೇ ಮುಂದುವರಿಯುವಂತೆ ಮಾಡಬೇಕಾಗಿದೆ. ಅನಾಥರು ಮತ್ತು ನಿರ್ಗತಿಕರಿಗೆ ಈ ಗತಿ ಬರಿಸುವುದು ರೋಚಕವಲ್ಲ. ಆದರೆ ಸಮುದಾಯದ ಮುಗ್ಧ ಹಸುಳೆಗಳ ಪೋಷಣೆಗೆ ಉತ್ತಮ ವ್ಯವಸ್ಥೆಯನ್ನು ಮಾಡಲು ಸಂಪನ್ಮೂಲಗಳನ್ನೊದಗಿಸಬೇಕೆಂಬ ಜಾಗೃತಿ ನಮ್ಮಲ್ಲಿ ಇಲ್ಲದಿರುವಾಗ ಪ್ರವಾದಿವಚನದಂತೆ* ಎರಡು ಅರೋಚಕ ಮಾರ್ಗಗಳ ಪೈಕಿ ಕಡಿಮೆ ಅರೋಚಕವಾದ ಮಾರ್ಗವನ್ನು ಅನುಸರಿಸುವುದೇ ನಮಗುಳಿದಿರುವ ಮಾರ್ಗ. ಓರ್ವ ಮುಸ್ಲಿಮ್ ಬಾಲಕ ತಾನು ಮುಸ್ಲಿಮನಾಗಿರುತ್ತಾ ಸೇವಕನಾಗಿ ಮಾರ್ಪಡುವುದು, ಅವನು ಸತ್ಯನಿಷೇಧದ ಕೊರಳಪಟ್ಟಿ ಧರಿಸಿ ಬ್ಯಾರಿಸ್ಟರನ್ನಾಗಿ ಮಾರ್ಪಡುವುದಕ್ಕಿಂತ ಎಷ್ಟೋ ಉತ್ತಮ.

---

* ಪ್ರಸ್ತುತ ಪ್ರವಾದಿವಚನದ ಆಧಾರದಲ್ಲಿ ಈ ಕೆಳಗಿನ ಶರೀಅತ್ ನಿಯಮವನ್ನು ಅಂಗೀಕರಿಸಲಾಗಿದೆ. ಎರಡು ನಿಷಿದ್ಧ (ಅಥವಾ ಅರೋಚಕ) ಕಾರ್ಯಗಳ ಪೈಕಿ ಒಂದನ್ನು ಅನುಸರಿಸುವುದು ಅನಿವಾರ್ಯವಾಗಿ ಮಾರ್ಪಟ್ಟರೆ ಆ ಪೈಕಿ ಕೆಳದರ್ಜೆಯ ನಿಷಿದ್ಧ (ಅಥವಾ ಅರೋಚಕ) ಕಾರ್ಯವನ್ನು ಅನುಸರಿಸಬೇಕಾಗಿದೆ.

## 4. ಮಿಶನರಿ ವಿದ್ಯಾಸಂಸ್ಥೆಗಳನ್ನು ತೊರೆಯುವುದು

ಮುಸ್ಲಿಮ್ ಬಾಲಕ-ಬಾಲಕಿಯರನ್ನು ಮಿಶನರಿ ವಿದ್ಯಾಸಂಸ್ಥೆಗಳಿಂದ ಮುಕ್ತಗೊಳಿಸುವ ಆಂದೋಲನವನ್ನೇ ನಡೆಸಬೇಕಾಗಿದೆ. ಈ ವಿದ್ಯಾಸಂಸ್ಥೆಗಳ ಉದ್ದೇಶ ಕೇವಲ ವಿದ್ಯೆ ಮತ್ತು ಕಲೆಯ ಬೆಳಕನ್ನು ಪಸರಿಸುವುದಲ್ಲ, ಅದರ ಜತೆಗೆ ಸಂತ ಪೌಲ್‌ನ ಸ್ವಯಂಕೃತ ಧರ್ಮದೆಡೆಗೆ ಆಹ್ವಾನ ನೀಡುವುದೂ ಆಗಿದೆ. ಅವರ ಶಿಕ್ಷಣದಿಂದಾಗಿ ವಿದ್ಯಾರ್ಥಿಗಳು ಬಹಿರಂಗ ಧರ್ಮಭ್ರಷ್ಟತೆಗೆ ಒಳಗಾಗದಿದ್ದರೂ ಕನಿಷ್ಠಪಕ್ಷ ಸ್ವಧರ್ಮದಿಂದ ಖಂಡಿತವಾಗಿಯೂ ವಿಮುಖರಾಗುತ್ತಾರೆ. ಅವರ ಹೃದಯದಲ್ಲಿ ಇಸ್ಲಾಮಿನ ಕುರಿತು ಗೌರವ ಬಾಕಿಯುಳಿಯುವುದಿಲ್ಲ. ಇಸ್ಲಾಮೀ ಬೋಧನೆಗಳಿಂದ ಅವರು ಬಹಿರಂಗವಾಗಿ ದೂರ ಸರಿಯಲಾರಂಭಿಸುತ್ತಾರೆ. ಆರಾಧನಾಕರ್ಮಗಳನ್ನು ವಿನೋದವೆಂದು ಭಾವಿಸತೊಡಗುತ್ತಾರೆ. ಇಸ್ಲಾಮೀ ಲಾಂಛನಗಳನ್ನು ಅಣಕಿಸಲಾರಂಭಿಸುತ್ತಾರೆ. ಕೌಟುಂಬಿಕ ಬಂಧನ ಮತ್ತು ಕಟ್ಟುಪಾಡುಗಳಿಂದಾಗಿ ಮಾತ್ರ ಇಸ್ಲಾಮಿನೊಂದಿಗೆ ಅವರ ನಾಮ ಮಾತ್ರದ ಸಂಬಂಧ ಬಾಕಿಯುಳಿದಿರುತ್ತದೆ. ಅದರ ಜತೆಗೆ ಮಿಸ್ಟರ್ ಅರ್‌ನಾಲ್ಡ್‌ನ ಪ್ರಕಾರ ಮಿಶನರಿ ವಿದ್ಯಾಸಂಸ್ಥೆಗಳ ಮೂಲಕ ಕೆಲವೊಮ್ಮೆ ತದ್ವಿರುದ್ಧವಾದ ಪರಿಣಾಮವೂ ಆಗಿದೆ ಎಂಬುದು ನಿಜ. ವಿದ್ಯಾರ್ಥಿಗಳು ಧರ್ಮಭ್ರಷ್ಟರಾಗುವ ಬದಲು ಕ್ರೈಸ್ತ ಧರ್ಮದ ದೌರ್ಬಲ್ಯಗಳನ್ನು ಅರಿತು ಅದರ ಶತ್ರುಗಳಾಗಿ ಮಾರ್ಪಟ್ಟ ನಿದರ್ಶನಗಳೂ ಇವೆ. ಆದರೆ ಇಂತಹ ಪವಿತ್ರಾತ್ಮರು ಕಂಡು ಬರುವುದು ಬಹಳ ಕಡಿಮೆ. ಸಾಮಾನ್ಯವಾಗಿ ಮಿಶನರಿ ಸಂಸ್ಥೆಗಳಲ್ಲಿ ಕಲಿಯುವ ವಿದ್ಯಾರ್ಥಿಗಳ ಸ್ಥಿತಿ ನಾವು ಮೊದಲು ವಿವರಿಸಿರುವಂತೆಯೇ ಇದೆ. ಅವರನ್ನು ಈ ಧರ್ಮರಾಹಿತ್ಯದ ಅಪಾಯದಿಂದ ರಕ್ಷಿಸುವುದೂ ನಿಜವಾಗಿ ಒಂದು ಮಹಾ ಧಾರ್ಮಿಕ ಸೇವೆಯೇ ಆಗಿದೆ.

ಮುಸ್ಲಿಮರಲ್ಲಿ ಶಿಕ್ಷಣದ ಕೊರತೆಯಿದೆ ಮತ್ತು ಅದರ ಪರಿಹಾರಕ್ಕೆ ಸೂಕ್ತ ವ್ಯವಸ್ಥೆಯಿಲ್ಲ. ಹಾಗಿರುವಾಗ ಮಿಶನರಿ ಸಂಸ್ಥೆಗಳನ್ನು ಕೂಡ ಬಹಿಷ್ಕರಿಸಲಾದರೆ ನಮ್ಮ ಮಕ್ಕಳು ಕಲಿಯುವುದು ಹೇಗೆ? ಇವೇ ಮುಂತಾದ ನೆವನಗಳನ್ನು ಈ ಆಂದೋಲನದ ವಿರುದ್ಧ ಪ್ರಕಟಿಸಲಾಗುತ್ತದೆ. ಮಿಶನರಿ ಸಂಸ್ಥೆಗಳನ್ನು ತೊರೆಯುವುದರಿಂದಾಗುವ ಕೊರತೆಯನ್ನು ಸರಕಾರಿ ಮತ್ತು ಇಸ್ಲಾಮೀ ಶಿಕ್ಷಣ ಸಂಸ್ಥೆಗಳು ತುಂಬುತ್ತವೆ. ಅಲ್ಲಿನ ಶಿಕ್ಷಣವೇ ನಮ್ಮ ಪಾಲಿಗೆ ಪಾಶಸ್ತ್ಯ ಪ್ರಧಾನವಾಗಿದೆ. ಇನ್ನು ಒಂದು ವೇಳೆ ಅಲ್ಲಿಯೂ ಶಿಕ್ಷಣದ ಸಮಸ್ಯೆ ಬಗೆಹರಿಯದಿದ್ದರೆ ನಾವು ಒಂದು ವಿಷಯವನ್ನು ನೆನಪಿಟ್ಟುಕೊಳ್ಳಬೇಕು-

ಉನ್ನತ ಶಿಕ್ಷಣಕ್ಕೆ ಪ್ರತಿಯಾಗಿ ಧರ್ಮವನ್ನು ತ್ಯಾಗ ಮಾಡಲು ಸಾಧ್ಯವಿಲ್ಲವೆಂಬುದು ನೈಜ ಮುಸ್ಲಿಮನ ದೃಷ್ಟಿಕೋನವಾಗಿದೆ. ಮಿಶನರಿ ವಿದ್ಯಾಲಯಗಳಲ್ಲದೆ ಮುಸ್ಲಿಮರಿಗೆ ತಮ್ಮ ಶೈಕ್ಷಣಿಕ ಅವಶ್ಯಕತೆಗಳನ್ನು ಈಡೇರಿಸಲು ಬೇರಾವುದೇ ಆಶ್ರಯವಿಲ್ಲದಿದ್ದರೆ, ನಮ್ಮ ಮಕ್ಕಳು ಅಜ್ಞಾನಿಗಳಾಗಿರುವುದೇ ಅವರು ಇಸ್ಲಾಮಿನಿಂದ ದೂರ ಸರಿಯುವುದಕ್ಕಿಂತ ಉತ್ತಮವಾದುದು.

ಆದ್ದರಿಂದ ಮಿಶನರಿ ವಿದ್ಯಾಲಯಗಳ ವಿರುದ್ಧ ಸಕ್ರಿಯವಾದ ಅಭಿಯಾನ ನಡೆಸಬೇಕಾಗಿದೆ. ಮಾತ್ರವಲ್ಲ ಮುಸ್ಲಿಮರೆಲ್ಲರೂ ತಮ್ಮ ಮಕ್ಕಳನ್ನು ಮಿಶನರಿ ಸಂಸ್ಥೆಗಳಿಂದ ಹೊರತೆಗೆಯಲು ಅವರನ್ನು ಸನ್ನದ್ಧಗೊಳಿಸಬೇಕಾಗಿದೆ.

## . ಆರ್ಥಿಕ ದಾಸ್ಯದಿಂದ ವಿಮುಕ್ತಿ

ಕೊನೆಯ ಮತ್ತು ಪ್ರಸಕ್ತ ಪರಿಸ್ಥಿತಿಗಳ ಹಿನ್ನೆಲೆಯಲ್ಲಿ ಅತ್ಯಂತ ಪ್ರಮುಖವಾದ ಉಪಾಯವೇನೆಂದರೆ ಮುಸ್ಲಿಮರನ್ನು ಅವರ ಆರ್ಥಿಕ ದಾಸ್ಯದಿಂದ ಮುಕ್ತಗೊಳಿಸಬೇಕಾಗಿದೆ. ಭಾರತೀಯ ಮುಸ್ಲಿಮರ ಆರ್ಥಿಕ ವಿಜಯಕ್ಕೆ ಕಾರಣ ಅವರ ಸರಕಾರವಾಗಿತ್ತು. ಅವರಲ್ಲಿ ವ್ಯಾಪಾರ ಮತ್ತು ಬಂಡವಾಳ ಹೂಡಿಕೆಯ ಆಸಕ್ತಿ ಎಂದೂ ಇರಲಿಲ್ಲ. ಅವರಲ್ಲಿ ಕೈಗಾರಿಕೆಯ ಬಗ್ಗೆ ಸ್ವಾಭಾವಿಕವಾದ ಆಸಕ್ತಿಯಿತ್ತು. ಅದು ಕೂಡ ಸರಕಾರ ಮತ್ತು ಸರಕಾರಿ ಪ್ರಭೃತಿಗಳ ಆಶ್ರಯಕ್ಕೆ ಅಧೀನವಾಗಿತ್ತು. ಅವರ ಸರಕಾರ ಕೊನೆಗೊಂಡಾಗ ಸುಭಿಕ್ಷೆ ಮತ್ತು ಸಿರಿವಂತಿಕೆಯ ಚಿಲುಮೆಯೂ ಬತ್ತಿದಂತಾಯಿತು. ಆದ್ದರಿಂದ ಕೈಗಾರಿಕೆ ಮತ್ತು ಕೃಷಿಯನ್ನು ಆಶ್ರಯಿಸಿಕೊಂಡಿದ್ದ ಮುಸ್ಲಿಮರೆಲ್ಲರೂ ಇಂದು ಬಂಡವಾಳಶಾಹಿಗಳ ಗುಲಾಮರಾಗಿ ಮಾರ್ಪಟ್ಟಿದ್ದಾರೆ. ಇನ್ನೂ ವಂಶಪಾರಂಪರ್ಯದಿಂದ ಸಿರಿವಂತರಾಗಿದ್ದವರು ತಮ್ಮ ಕೆಟ್ಟ ಸಂಸ್ಕೃತಿ ಮತ್ತು ದುಂದು ವ್ಯಯಕ್ಕೆ ಕಾರಣವಾಗುವ ಅಭ್ಯಾಸಗಳಿಂದಾಗಿ ದಿನನಿತ್ಯ ಸಾಲಕ್ಕೆ ಬಲಿಯಾಗುತ್ತಿದ್ದಾರೆ.

ನಗರ ಪ್ರದೇಶಗಳಲ್ಲಿ ಮತ್ತು ದೊಡ್ಡ ದೊಡ್ಡ ಗ್ರಾಮಗಳಲ್ಲಿ ಅವರ ಈ ಪರಿಸ್ಥಿತಿ ಅವರನ್ನು ಆರ್ಥಿಕ ದಾಸ್ಯಕ್ಕೆ ಮಾತ್ರವೇ ಈಡು ಮಾಡಿದೆ. ಆದರೆ ದೂರ ದೂರದ ಹಳ್ಳಿಗಳಲ್ಲಿ ಈ ಪರಿಸ್ಥಿತಿಯೇ ಮುಸ್ಲಿಮರ ಧರ್ಮಭ್ರಷ್ಟತೆಗೆ ಮೂಲ ಕಾರಣವಾಗಿದೆ. ಮುಸ್ಲಿಮೇತರ ಪ್ರಚಾರಕರು ಬಹಳ ಸಕ್ರಿಯರಾಗಿ ಅಜ್ಞಾನಕ್ಕೀಡಾಗಿರುವ ಮುಸ್ಲಿಮ್ ಹಳ್ಳಿಗರನ್ನು ಧರ್ಮ ಭ್ರಷ್ಟರನ್ನಾಗಿ ಮಾಡಲು ಪ್ರಯತ್ನಿಸುತ್ತಿದ್ದಾರೆ. ಆದ್ದರಿಂದ ಇಸ್ಲಾಮಿನ ರಕ್ಷಣೆಗಾಗಿ ಈ ಪಿಡುಗನ್ನು ನಿವಾರಿಸುವುದೂ ಅತ್ಯವಶ್ಯಕವಾಗಿದೆ. ಮಾತ್ರವಲ್ಲ, ಆಧುನಿಕ ಭಾರತದಲ್ಲಿ (ಅರ್ಥಾತ್ ಅವಿಭಜಿತ ಭಾರತ) ಮುಸ್ಲಿಮರ ಅಸ್ತಿತ್ವಕ್ಕೆ ಬೆದರಿಕೆಯೊಡ್ಡುತ್ತಿರುವುದು ಅವರ 'ಆರ್ಥಿಕ ದಾಸ್ಯ'ವೇ ಆಗಿದೆ ಎಂದು ಹೇಳಿದರೆ ತಪ್ಪಾಗಲಾರದು.

## ಮಾಡು ಅಥವಾ ಮಡಿ

ಈ ಅಪಾಯವನ್ನು ಎದುರಿಸಲು ಮುಸ್ಲಿಮರು ಯಾವ ಉಪಾಯಗಳನ್ನು ಅನುಸರಿಸಬೇಕೆಂಬುದು ಪ್ರತ್ಯೇಕ ಚರ್ಚಾ ವಿಷಯವಾಗಿದೆ. ಆ ಬಗ್ಗೆ ವಿಸ್ತಾರವಾಗಿ ಪ್ರಸ್ತಾಪಿಸಲು ಇಲ್ಲಿ ಅವಕಾಶವಿಲ್ಲ. ಆದರೆ ಈ ಮಹತ್ತರವಾದ ಕೆಲಸವನ್ನು ನಿಭಾಯಿಸಲು ನಮ್ಮ ಶಕ್ತಿಯ ಪ್ರಸಕ್ತ ವಿಕೇಂದ್ರಿಕರಣ ಮತ್ತು ನಮ್ಮ ಸಮೂಹಗಳ ಪ್ರಸಕ್ತ ಒಡಕು ಸರ್ವಥಾ ಸೂಕ್ತವಲ್ಲ. ಸಮುದಾಯದ ಸಂಘಟನಾ ಶಕ್ತಿಯ ಅವಶ್ಯಕತೆ ತಲೆದೋರಿರುವಾಗ, ನಾವು ಈಗಲೂ ನಮ್ಮ ಬೆಕ್ಕಿನ ಬಿಡಾರ ಬೇರೆ ಮಾಡುವುದರಲ್ಲಿ ತಲ್ಲೀನರಾಗಿದ್ದೇವೆ.

ಅನೇಕ ವರ್ಷಗಳ ನಿರಂತರ ಪ್ರಯತ್ನಗಳ ಅಗತ್ಯ ವಿರುವಲ್ಲಿ ನಾವು ಸುಲಭವಾಗಿ ಅಂಗೈಯಲ್ಲಿ ಬೆಣ್ಣೆ ಹುಡುಕಲು ಪ್ರಯತ್ನಿಸುತ್ತೇವೆ. ನಮಗಿನ್ನೂ ಬಾಹ್ಯವಾದ ಸದ್ದುಗದ್ದಲವೆಬ್ಬಿಸುವುದರಲ್ಲೇ ಆಸಕ್ತಿಯಿದೆ. ಆದರೆ ಇಲ್ಲಿ ಅಗತ್ಯವಿರುವುದು ಧ್ಯೇಯದ ಬಗ್ಗೆ

ಆಳ ಪರಿಜ್ಞಾನ ಮತ್ತು ನೈಜ ನಿಷ್ಕಾಮ ಕರ್ಮ ಹಾಗೂ ತ್ಯಾಗ ಬಲಿದಾನಗಳಾಗಿವೆ. ನಮಗೆ ಬೆಂಕಿಯಂತೆ ಘಕ್ಕನೆ ಹೊತ್ತಿ ಉರಿಯಲು ಮಾತ್ರ ಗೊತ್ತಿದೆ. ಆದರೆ ಇಲ್ಲಿ ಅದರ ಅಗತ್ಯವಿಲ್ಲ. ನಮಗಿಂದು ಅಗತ್ಯವಿರುವುದು ಅನೇಕ ವರ್ಷಗಳ ಒಳಗಿಂದೊಳಗೇ ಬಿಸಿ ಮುಟ್ಟಿಸಿ ಮುತ್ತು ಹವಳಗಳನ್ನುಂಟು ಮಾಡುವ ಮಂದ ಶಾಖವಾಗಿದೆ.

ನಮಗೆ ಕೆಲಸ ಮಾಡುವ ಸರಿಯಾದ ವಿಧಾನ ಬರದಿದ್ದರೆ ನಮ್ಮೆಲ್ಲಾ ಉಪಾಯಗಳು ಮತ್ತು ಸಲಹೆಗಳು ವ್ಯರ್ಥವೆನಿಸಿಕೊಳ್ಳುತ್ತವೆ. ಅನ್ಯರನ್ನು ಎದುರಿಸುವ ಬದಲು ನಾವೇ ಪರಸ್ಪರ ಸ್ಪರ್ಧಿಸುತ್ತಿದ್ದರೆ, ನಮ್ಮ ಆಂದೋಲನಗಳಲ್ಲೂ ಈ ಸ್ಫೂರ್ತಿಯೇ ಕಾರ್ಯತತ್ಪರವಾಗಿದ್ದರೆ ಐಕ್ಯ ಮತ್ತು ಭಿನ್ನ ಮತದ ಇಸ್ಲಾಮೀ ತತ್ವಾದರ್ಶಗಳ ಬದಲು ಭಿನ್ನಮತದ ಶುದ್ಧ ಅನಿಸ್ಲಾಮಿಕ ತತ್ವವನ್ನೇ ನಾವು ನಿರಂತರ ಪಾಲಿಸುವುದಾದರೆ ಈ ಎಲ್ಲಾ ಯೋಜನೆಗಳನ್ನು ಕೈ ಬಿಡುವುದೇ ಲೇಸು. ಅನಂತರ ಇಸ್ಲಾಮಿನ ಭವಿಷ್ಯವನ್ನು ಗಾಳಿಗೆ ತೂರಿ ನಾವೆಲ್ಲ ಸ್ವೇಚ್ಛಾವೃತ್ತಿಯಲ್ಲಿ ತಲ್ಲೀನರಾಗುವುದೇ ಉತ್ತಮ.

## ಸಮುದಾಯದ ವರಿಷ್ಠರಿಗೆ ಕಿವಿಮಾತು

ಯಾವುದೇ ಕಟ್ಟಡದ ನಿರ್ಮಾಣಕ್ಕೆ ಅತ್ಯುತ್ತಮವಾದ ಸಾಧನಗಳಿಗಿಂತ ಉನ್ನತವಾದ ನಿರ್ಮಾಣ ಕೌಶಲ್ಯ ಹೆಚ್ಚು ಅಪೇಕ್ಷಣೀಯವಾಗಿದೆ. ಅಂತೆಯೇ ಉತ್ತಮ ಸಲಹೆ ಮತ್ತು ವ್ಯಾವಹಾರಿಕ ಉಪಾಯಗಳಿಗಿಂತ ಕಾರ್ಯರಂಗಕ್ಕಿಳಿಯುವ ಅರ್ಹತೆಯೇ ನಮಗಿಂದು ಹೆಚ್ಚು ಅಪೇಕ್ಷಣೀಯವಾಗಿದೆ. ಮದ್ದು ಎಷ್ಟೇ ಪರಿಣಾಮಕಾರಿಯಾಗಿರಲಿ, ವೈದ್ಯನಿಗೆ ಚಿಕಿತ್ಸೆ ಮಾಡುವ ಅರ್ಹತೆಯಿಲ್ಲದಿದ್ದರೆ ಅದರಿಂದ ರೋಗಿಗೆ ಯಾವ ಪ್ರಯೋಜನವೂ ಆಗಲಾರದು. ಆದ್ದರಿಂದ ಸಮುದಾಯದ ವರಿಷ್ಠರು ಕಾಲದ ಸಂಕೀರ್ಣತೆಯನ್ನು ಮನಗಾಣುತ್ತಾರೆಂದಾದರೆ ತಮ್ಮ ಇತರೆಲ್ಲಾ ಪ್ರಾಶಸ್ತ್ಯಗಳನ್ನು ಬಿಟ್ಟು ಸಮುದಾಯದ ಶಕ್ತಿಯನ್ನು ಸಂಘಟಿಸುವತ್ತ ಗಮನ ಕೊಡಬೇಕಾಗಿದೆ. ನಮ್ಮ ಸಾಮುದಾಯಿಕ ಚಳವಳಿಗಳನ್ನು ಕಾಡುತ್ತಿರುವ ಅರಾಜಕತೆಯನ್ನು ಅತಿ ಶೀಘ್ರ ಕೊನೆಗೊಳಿಸಬೇಕಾಗಿದೆ.

---